**ಪ್ರಸ್ತಾವನೆ:**

ವಿಠಲನಗರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಈ ಸಂಘವು 2005–06 ರಿಂದ 2009–10ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿಯ ಚುನಾವಣೆಯನ್ನು ನಡೆಸದೆ ಇರುವುದರಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 28(ಎ)(5) ರನ್ವಯ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಆಡಳಿತಾಧಿಕಾರಿಯನ್ನು ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ನೇಮಕ ಮಾಡಲಾಗಿತ್ತು. ಉಲ್ಲೇಖ (2) ರ ಪತ್ರದಲ್ಲಿ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ:14.10.2005 ರವರೆಗೆ ವಿಸ್ತರಿಸಲಾಗಿತ್ತು. ಉಲ್ಲೇಖ–3ರ ಪತ್ರದಲ್ಲಿ ಆಡಳಿತಾಧಿಕಾರಿಗಳು ತಾವು ಸ್ವಯಂ ಪ್ರಭಾರವನ್ನು ವಹಿಸಿಕೊಂಡಿದ್ದು, ಸಂಘದಲ್ಲಿ ಯಾವುದೇ ಪುಸ್ತಕಗಳು ಲಭ್ಯವಿಲ್ಲದಿರುವುದರಿಂದ ಹಾಗೂ ಈ ಕಛೇರಿಯಿಂದ ಚುನಾವಣಾಧಿಕಾರಿ ನೇಮಕ ಮಾಡಿದ್ದರೂ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿದ್ದು, ಸಂಘದ ಯಾವುದೇ ಪುಸ್ತಕಗಳು ಲಭ್ಯವಿಲ್ಲದೇ ಇರುವುದರಿಂದ ಹಾಗೂ ಆಡಳಿತ ಮಂಡಳಿ ರದ್ಧತಿಯಾದ ನಂತರ ಸಂಘವನ್ನು ಸರಿಯಾಗಿ ನಡೆಸಿಕೊಂಡು ಹೋಗುವ ಬಗ್ಗೆ ತಹಲ್‌ವರೆಗೂ ದಾವೆಗಳಲ್ಲಿ ಪಕ್ಷಗಾರರಾಗಿರುವ ಸದಸ್ಯರು ಹಾಗೂ ಒಂದೆರಡು ಜನರನ್ನು ಹೊರತುಪಡಿಸಿದರೆ ಬೇರಾರು ಈ ಸಂಘದ ಬಗ್ಗೆ ಮುತುವರ್ಜಿ ವಹಿಸದೆ ಇರುವ ಕಾರಣ ಈ ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ(3)ರ ಪತ್ರದಲ್ಲಿ ಹಾಗೂ ದಿನಾಂಕ:04.01.2010ರ ನಡವಳಿಯಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿದ್ದು, ಸಂಘದ ಸದಸ್ಯರುಗಳಿಗೆ ಯಾವುದೇ ರೀತಿಯ ಸೌಲಭ್ಯಗಳು ದೊರೆಯದೇ ಇರುವುದರಿಂದ ಹಾಗೂ ಆಡಳಿತಾಧಿಕಾರಿಗಳ ಶಿಫಾರಸ್ಸಿನಂತೆ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ:21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ವಿಠಲನಗರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಈ ಸಂಘವನ್ನು ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು, ಸಂಘದ ಆಸ್ತಿ ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೆಗೊಳಿಸಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:26.02.2010ರಂದು ಹೊರಡಿಸಿರುತ್ತೇನೆ.

**ಸಿ.ಎಸ್. ವೀರೇಶ್**

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,

ಬೆಂಗಳೂರು ಪ್ರಾಂತ, ಬೆಂಗಳೂರು.

ಪಿಆರ್‌–394

**ಅಬಕಾರಿ ಆಯುಕ್ತರ ಕಛೇರಿ, ಒಕ್ಕಲಿಗರ ಭವನ, ಕೆ.ಆರ್.ಸಿ. ವೃತ್ತ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ:ಇಸಿಇ/11/ಆರ್‌ಟಿಐ/2010, ದಿನಾಂಕ:9ನೇ ಮಾರ್ಚ್, 2010**

ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಇಸಿಇ/24/ಕೇ.ಮಾಹಅ:2005 ದಿನಾಂಕ:03.04.2005ನ್ನು ಭಾಗಶಃ ಮಾರ್ಪಾಡು ಮಾಡಲಾಗಿದೆ. ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್–5ರ ಸಂಪೂರ್ಣ ಅನುಷ್ಠಾನಕ್ಕಾಗಿ ಅಬಕಾರಿ ಇಲಾಖೆಗೆ ಸಂಬಂಧಿಸಿದಂತೆ "ಅಬಕಾರಿ ಉಪ ಆಯುಕ್ತರು (ಕಾನೂನು), ಅಬಕಾರಿ ಆಯುಕ್ತರ ಕಛೇರಿ, ಬೆಂಗಳೂರು" ಇವರನ್ನು ನೋಡೆಲ್ ಅಧಿಕಾರಿಯನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

ಇಲಾಖೆಯ ಮಾಹಿತಿ ಹಕ್ಕು ಅಧಿನಿಯಮದ ಅನುಷ್ಠಾನದ ಹೊಣೆ ನೋಡಲ್ ಅಧಿಕಾರಿಯದ್ದಾಗಿರುತ್ತದೆ. ಕೆಳಕಂಡ ಕಾರ್ಯಗಳನ್ನು ನೋಡಲ್ ಅಧಿಕಾರಿಯು ನಿರ್ವಹಿಸಬೇಕಾಗಿರುತ್ತದೆ.

(ಅ) ಇಲಾಖೆಯಲ್ಲಿರುವ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳ/ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಪಟ್ಟಿಯನ್ನು ನಿರ್ವಹಿಸುವುದು/ ಕಾಲಕಾಲಕ್ಕೆ Up-date ಮಾಡುವುದು/ ಪ್ರಕಟಿಸುವುದು.

(ಆ) ಕರ್ನಾಟಕ ಮಾಹಿತಿ ಆಯೋಗಕ್ಕೆ ವಾರ್ಷಿಕ ವರದಿ ತಯಾರಿಸಲು ಬೇಕಾಗುವ ಎಲ್ಲಾ ಮಾಹಿತಿಯನ್ನು ಒದಗಿಸುವುದು.

(ಇ) ಮಾಹಿತಿ ಕೋರಿ ಇಲಾಖೆಯಲ್ಲಿ ಸ್ವೀಕೃತವಾಗುವ ಅರ್ಜಿಗಳ ವಿಲೇವಾರಿಯ ಮೇಲ್ವಿಚಾರಣೆ ಮಾಡುವುದು.

ಪಿಆರ್–399 ಅಬಕಾರಿ ಆಯುಕ್ತರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಕಾರ್ಯವಾಹಿಗಳು**

**ಅಮಲ್ಜಾರಿ ಸಂಖ್ಯೆ:222/2008–2009 ಮತ್ತು 223/2008–2009**

**ಬಿಡ್‌ದಾರರು: ಶ್ರೀ ಎ.ಎಂ. ವಿಜಯಕುಮಾರ್ ಬಿನ್ ಮಹಾಲಿಂಗಪ್ಪ, ಆಲದಹಳ್ಳಿ, ತಿಪಟೂರು ತಾಲ್ಲೂಕು.**

| **ಡಿಕ್ರಿ ಹೋಲ್ಡರ್** | **ವಿರುದ್ಧ** | **ತೀರ್ಪು ಋಣಿಗಳು** |
|---|---|---|
| ಕಾರ್ಯದರ್ಶಿ ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು. | | ಶ್ರೀ ಎಸ್. ಕೃಷ್ಣ ಕೋಂ ಸೀಬಿ ರಂಗಯ್ಯ ಮತ್ತು ಶ್ರೀಮತಿ ಜಯಲಕ್ಷ್ಮೀ, ಪ್ರಿಯಾಂಕ ಇಂಗ್ಲೀಷ್ ಸ್ಕೂಲ್ ಗೋಕುಲ ಬಡಾವಣೆ, ತುಮಕೂರು. |

**ಪ್ರಸ್ತಾವನೆ:**

ಕಾರ್ಯದರ್ಶಿ ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಇವರು ತೀರ್ಪುಋಣಿಗಳಿಂದ ವಸೂಲಾಗಬೇಕಾದ ಸ್ಥಿರಾಸ್ತಿ ಆಧಾರ ಸಾಲ (1) ರೂ.12,27,946=00 (2) ರೂ.4,59,885=00ಗಳ ವಸೂಲಾತಿಗಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪವಿಭಾಗ ತುಮಕೂರು ಇವರ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ದಾವೆ (1) ನಂ.27/2008–2009, (2) ನಂ.28/2008–2009 ದಿನಾಂಕ:18.10.2008ರ ರೀತ್ಯಾ ಡಿಕ್ರಿ ಪಡೆದಿದ್ದು, ನಂತರ ಈ ಹಣದ ವಸೂಲಾತಿಗಾಗಿ ಅಮಲ್ಜಾರಿ ಅರ್ಜಿ ಹಾಕಿದ್ದು, ಸದರಿ ಅಮಲ್ಜಾರಿ ಅರ್ಜಿ (1) ಸಂಖ್ಯೆ:222/2008–2009, ದಿನಾಂಕ:16.01.2009, (2) ಸಂಖ್ಯೆ:223/2008–2009 ದಿನಾಂಕ:16.01.2009, ಮೊಬಲಗು (1) ರೂ.12,30,066=00 (2) ರೂ.4,61,505=00, ಸದರಿ ಅಮಲ್ಜಾರಿಯನ್ನು ಮಾರಾಟಾಧಿಕಾರಿ ಕರ್ನಾಟಕ ರಾಜ್ಯ ಸಹಕಾರ ವಸತಿ ಮಹಾಮಂಡಲ ನಿ., ಬೆಂಗಳೂರು ಇವರಿಗೆ ವಹಿಸಿದ್ದು, ಸುಸ್ತಿದಾರರಿಂದ ಬಾಕಿ ಹಣದ ವಸೂಲಾತಿಗಾಗಿ ಸಂಘಕ್ಕೆ ಆಧಾರ ಮಾಡಿಕೊಟ್ಟ ಸ್ಥಿರ ಸ್ವತ್ತನ್ನು ಹರಾಜಿನ ಮೂಲಕ ಮಾರಾಟ ಮಾಡಲು ನಮೂನೆ 8 ಮತ್ತು 9ನ್ನು ದಿನಾಂಕ:17.01.2009, ದಿನಾಂಕ:13.07.2009ರ ದಿನಾಂಕಗಳ ನೋಟಿಸ್‌ಗಳನ್ನು ತೀರ್ಪುಋಣಿದಾರರಿಗೆ ಜಾರಿಮಾಡಲಾಗಿರುವುದನ್ನು ಗಮನಿಸಲಾಗಿದೆ. ಮತ್ತು ನಿಗದಿ ಪಡಿಸಿದ ದಿನಾಂಕಗಳಂದು ಸ್ಥಿರ ಸ್ವತ್ತಿನ ಹರಾಜು ಪ್ರಕ್ರಿಯೇ ನಡೆದಿರುವುದಿಲ್ಲ. ಕಾರಣ ತೀರ್ಪುಋಣಿಯವರು ಗೌರವ ಕರ್ನಾಟಕ ನ್ಯಾಯಾಧೀಕರಣ ಬೆಂಗಳೂರು ಇದರಲ್ಲಿ 'ಅಪೀಲು ಸಂಖ್ಯೆ:610/2009ರ ರೀತ್ಯಾ ಅಪೀಲು ಸಲ್ಲಿಸಿದ್ದು, ದಿನಾಂಕ:14.09.2009ರಂದು ನ್ಯಾಯಾಲಯದ ಆದೇಶದಂತೆ ದಾವೆಯ ಮೊತ್ತದ ಶೇಕಡಾ 50ರಷ್ಟು ಹಣವನ್ನು ಠೇವಣಿ ಮಾಡಲು ಹತ್ತು ವಾರಗಳು ಅವಕಾಶ ನೀಡಿದ್ದು, ಈ ಅವಧಿಯೊಳಗೆ ಪಾವತಿ ಮಾಡಲು ತಪ್ಪಿದಲ್ಲಿ, ಈ ನ್ಯಾಯಾಲಯದಿಂದ ನೀಡಿರುವ ತಡೆಯಾಜ್ಞೆಯು ತೆರವುಗೊಳ್ಳುತ್ತದೆಂದು ಆದೇಶಿಸಿರುತ್ತದೆ. ಆದರೆ ತೀರ್ಪುಋಣಿಯವರು ನ್ಯಾಯಾಲಯದ ಆದೇಶದಂತೆ ಹಣವನ್ನು ಪಾವತಿಸಲು ವಿಫಲರಾದ ಕಾರಣ ಸ್ಥಿರಾಸ್ತಿಯನ್ನು ಹರಾಜು ಮಾಡುವ ಸಲುವಾಗಿ ದಿನಾಂಕ:10.12.2009 ರಂದು ನಮೂನೆ 8 ಮತ್ತು 9ನ್ನು ತೀರ್ಪುಋಣಿದಾರರಿಗೆ ಜಾರಿ ಮಾಡಿರುತ್ತಾರೆ. ಹರಾಜು ಪ್ರಕ್ರಿಯೆಗೆ ಮುನ್ನ ದಿನಾಂಕ:16.01.2010ರ ಪ್ರಜಾಪ್ರಗತಿ ಪತ್ರಿಕೆಯಲ್ಲಿ ಪ್ರಕಟಣೆಯನ್ನು ಹೊರಡಿಸಿರುವುದನ್ನು ಸಹ ಗಮನಿಸಲಾಗಿದೆ. ಆದರೂ ಸಹ ತೀರ್ಪುಋಣಿಗಳಾದ ಶ್ರೀ ಎಸ್. ಕೃಷ್ಣ ಬಿನ್ ಸೀಬಿ ರಂಗಯ್ಯ ಮತ್ತು ಶ್ರೀಮತಿ ಜಯಲಕ್ಷ್ಮೀ, ಪ್ರಿಯಾಂಕ ಇಂಗ್ಲೀಷ್ ಸ್ಕೂಲ್, ಗೋಕುಲ ಬಡಾವಣೆ, ತುಮಕೂರು ರವರು ತಮ್ಮ ಸುಸ್ತಿ ಸಾಲದ ಹಣವನ್ನು ಮರುಪಾವತಿಸಿರುವುದಿಲ್ಲವೆಂಬ ಅಂಶವನ್ನು ಈ ನ್ಯಾಯಾಲಯವು ಪರಿಶೀಲಿಸಿದೆ.

ಆದ ಕಾರಣ ಸಂಘದ ಮಾರಾಟಾಧಿಕಾರಿಗಳು, ತೀರ್ಪುಋಣಿಗಳ ಸ್ಥಿರ ಸ್ವತ್ತನ್ನು ದಿನಾಂಕ:19.01.2010 ರಂದು ಬಹಿರಂಗ ಹರಾಜು ನಡೆಸಿದ್ದು, ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಎ.ಎಂ. ವಿಜಯಕುಮಾರ್, ಬಿನ್ ಮಹಾಲಿಂಗಪ್ಪ, ಆಲದಹಳ್ಳಿ, ಬೆಳಗರಹಳ್ಳಿ ಅಂಚೆ, ತಿಪಟೂರು ತಾಲ್ಲೂಕು ಇವರಿಗೆ ಸ್ಥಿರ ಸ್ವತ್ತನ್ನು ರೂ.21,00,000–00 ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ, ಹರಾಜು ಸ್ಥಿರೀಕರಣಕ್ಕಾಗಿ ಈ ಕಛೇರಿಗೆ ಪ್ರಸ್ತಾವೆಯನ್ನು ಮಾರಾಟಾಧಿಕಾರಿಗಳು

ಕರ್ನಾಟಕ ರಾಜ್ಯ ಸಹಕಾರ ವಸತಿ ಮಹಾಮಂಡಳ ನಿ., ಬೆಂಗಳೂರು ರವರು ದಿನಾಂಕ:01.03.2010ರಂದು ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳೊಳಗೆ, ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಕರ್ನಾಟಕ ಸಹಕಾರ ಸಂಘಗಳ ನಿಬಂಧನೆ 1960ರ ನಿಯಮ 38(4)(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ, ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಹಾಗೂ ತೀರ್ಪುಋಣಿಗಳಾದ ಶ್ರೀ ಎಸ್. ಕೃಷ್ಣ ರವರು ದಿನಾಂಕ:19.01.2010ರಂದು ಮಾರಾಟಾಧಿಕಾರಿಗಳಿಗೆ ಪತ್ರ ನೀಡಿ ನನ್ನ ಸ್ಥಿರ ಸ್ವತ್ತನ್ನು ಹರಾಜು ಮಾಡಲು ನನ್ನ ಅಭ್ಯಂತರ ಏನೂ ಇರುವುದಿಲ್ಲ. ಮತ್ತು ದಿನಾಂಕ:25.02.2010ರಂದು ಮಾರಾಟಾಧಿಕಾರಿಗಳಿಗೆ ಪತ್ರ ನೀಡಿ ಸಾಲ ಮರುಪಾವತಿ ಮಾಡಲು ಶಕ್ತನಾಗಿರುವುದಿಲ್ಲ ಆದ ಕಾರಣ ಸ್ಥಿರಾಸ್ತಿಯ ಮಾರಾಟಕ್ಕೆ ನನ್ನ ಒಪ್ಪಿಗೆ ಇದೆಯೆಂದು ಲಿಖಿತ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಈ ಸಂಬಂಧ ಯಾವುದೇ ವಿಧವಾದ ಲಿಖಿತ ಆಕ್ಷೇಪಣೆಗಳು ಬಂದಿಲ್ಲವಾದ್ದರಿಂದ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸನಿ-32/ಎ.ಬಿ.ಎಸ್./ಸ್ಥಿರಾಸ್ತಿ ವರ್ಗಾವಣೆ/ಸಿಆರ್-175/2009-2010, ದಿನಾಂಕ:3ನೇ ಮಾರ್ಚ್, 2010**

ಶ್ರೀ ಗೋಪಾಲರೆಡ್ಡಿ, ಕೆ.ಸಿ.ಎಸ್. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು, ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ/69/ಸಿ.ಎಲ್.ಎಂ./2001 ದಿನಾಂಕ:21.11.2001ರ ಪ್ರಕಾರ ಪ್ರತ್ಯಾಯೋಜಿಸಲ್ಪಟ್ಟ ಕರ್ನಾಟಕ ಸಹಕಾರ ಸಂಘಗಳ ನಿಬಂಧನೆ 1960ರ ನಿಯಮ 38(6)ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಇದಕ್ಕೆ ತೀರ್ಪುಋಣಿಗಳಾದ ಶ್ರೀ ಎಸ್. ಕೃಷ್ಣ ಬಿನ್ ಸೀಬಿ ರಂಗಯ್ಯ ಮತ್ತು ಶ್ರೀಮತಿ ಜಯಲಕ್ಷ್ಮೀ, ಪ್ರಿಯಾಂಕ ಇಂಗ್ಲೀಷ್ ಸ್ಕೂಲ್, ಗೋಕುಲ ಬಡಾವಣೆ, ತುಮಕೂರು ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಯನ್ನು ದಿನಾಂಕ:19.01.2010ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಎ.ಎಂ. ವಿಜಯಕುಮಾರ್, ಬಿನ್ ಮಹಾಲಿಂಗಪ್ಪ, ಆಲದಹಳ್ಳಿ, ಬೆಳಗರಹಳ್ಳಿ ಅಂಚೆ, ತಿಪಟೂರು ತಾಲ್ಲೂಕು ತುಮಕೂರು ಜಿಲ್ಲೆ ರವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಶ್ರೀ ಎ.ಎಂ. ವಿಜಯಕುಮಾರ್ ಬಿನ್ ಮಹಾಲಿಂಗಪ್ಪ, ಆಲದಹಳ್ಳಿ, ಬೆಳಗರಹಳ್ಳಿ ಅಂಚೆ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ, ರವರು ಡಿಕ್ರಿಹೋಲ್ಡರ್ ಸಂಘಕ್ಕೆ ಪಾವತಿಸಿದ ರೂ.21,00,000-00 ಗಳಲ್ಲಿ ಡಿಕ್ರಿ ಹೋಲ್ಡರ್ ಸಂಘಕ್ಕೆ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟದ ಆದೇಶ ಮಾಡಲ್ಪಟ್ಟಿತ್ತೋ, ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು, ತೀರ್ಪು ಋಣಿ ಇವರ ಸಾಲದ ಖಾತೆಗೆ ಜಮಾ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಡಿಕ್ರಿ ಹೋಲ್ಡರ್ ಸಂಘದ ಕಾರ್ಯದರ್ಶಿಯವರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

1) ತುಮಕೂರು ಟೌನ್, ಬಡ್ಡಿಹಳ್ಳಿ, ಗೋಕುಲ ಬಡಾವಣೆ, ವಾರ್ಡ್‌ನಂ.32 ರಲ್ಲಿನ ಖಾತೆ ನಂ.58/2154, ಸರ್ವೆ ನಂ.5:1ರ ಸೈಟ್ ನಂಬರ್ 17ಕ್ಕೆ ಚೆಕ್ಕುಬಂದಿ:

ಪೂರ್ವಕ್ಕೆ: ಸೈಟ್ ನಂ.18

ಪಶ್ಚಿಮಕ್ಕೆ: ಸೈಟ್ ನಂ.16

ಉತ್ತರಕ್ಕೆ: ಸೈಟ್ ನಂ.19 ಮತ್ತು 20ರ ಸೈಟ್‌ನಲ್ಲಿನ ಮನೆ

ದಕ್ಷಿಣಕ್ಕೆ: ಪೂಜಯ್ಯ ರವರ ಆಸ್ತಿ.

ಮತ್ತು ಅಳತೆ ಪೂರ್ವ-ಪಶ್ಚಿಮ 30 ಅಡಿಗಳು, ಉತ್ತರ-ದಕ್ಷಿಣ 52 ಅಡಿಗಳು ಪೂರ್ವದ ಕಡೆ, ಪಶ್ಚಿಮದ ಕಡೆ 53.5 ಅಡಿಗಳು.

ಒಟ್ಟು ವಿಸ್ತೀರ್ಣ 1590 ಚದರ ಅಡಿಗಳ ವಿಸ್ತೀರ್ಣದಲ್ಲಿ ಕಟ್ಟಡಸೇರಿ.

2) ತುಮಕೂರು ಟೌನ್, ಬಡ್ಡಿಹಳ್ಳಿ, ಗೋಕುಲ ಬಡಾವಣೆ, ವಾರ್ಡ್ ನಂ.32ರಲ್ಲಿನ ಖಾತೆ ನಂ.59/2155, ಸರ್ವೆ ನಂ.5:1 ರ ಸೈಟ್ ನಂಬರ್ 16ಕ್ಕೆ ಚೆಕ್ಕುಬಂದಿ:

ಪೂರ್ವಕ್ಕೆ: ಸೈಟ್ ನಂ.17

ಪಶ್ಚಿಮಕ್ಕೆ: ರಸ್ತೆ.

ಉತ್ತರಕ್ಕೆ: ಸೈಟ್ ನಂ.20ರಲ್ಲಿನ ಮನೆ

ದಕ್ಷಿಣಕ್ಕೆ: ಪೂಜಯ್ಯ ರವರ ಆಸ್ತಿ.

ಮತ್ತು ಅಳತೆ ಪೂರ್ವ-ಪಶ್ಚಿಮ 35 ಅಡಿಗಳು, ಉತ್ತರ-ದಕ್ಷಿಣ 53.5 ಅಡಿಗಳು ಪೂರ್ವದ ಕಡೆ, ಪಶ್ಚಿಮದ ಕಡೆ 55 ಅಡಿಗಳು.

ಒಟ್ಟು ವಿಸ್ತೀರ್ಣ 1898.75 ಚದರ ಅಡಿಗಳ ವಿಸ್ತೀರ್ಣದಲ್ಲಿನ ಕಟ್ಟಡಸೇರಿ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:03.03.2010 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಕಾರ್ಯವಾಹಿಗಳು**

**ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ, 38(7)ರನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಸಂಖ್ಯೆ:222/2008-2009 ಮತ್ತು 223/2008-2009**

**ಉಪಸ್ಥಿತರು:** ಶ್ರೀ ಗೋಪಾಲರೆಡ್ಡಿ, ಕೆ.ಸಿ.ಎಸ್., ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು.

**ಬಿಡ್‌ದಾರರು:** ಶ್ರೀ ಎ.ಎಂ. ವಿಜಯಕುಮಾರ್ ಬಿನ್ ಮಹಾಲಿಂಗಪ್ಪ, ಆಲದಹಳ್ಳಿ, ತಿಪಟೂರು ತಾಲ್ಲೂಕು.

| **ಡಿಕ್ರಿ ಹೋಲ್ಡರ್** | **ವಿರುದ್ಧ** | **ತೀರ್ಪು ಋಣಿಗಳು** |
|---|---|---|
| ಕಾರ್ಯದರ್ಶಿ ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು. | | ಶ್ರೀ ಎಸ್. ಕೃಷ್ಣ ಕೋಂ ಸೀಬಿ ರಂಗಯ್ಯ ಮತ್ತು ಶ್ರೀಮತಿ ಜಯಲಕ್ಷ್ಮೀ, ಪ್ರಿಯಾಂಕ ಇಂಗ್ಲೀಷ್ ಸ್ಕೂಲ್ ಗೋಕುಲ ಬಡಾವಣೆ, ತುಮಕೂರು. |

ಶ್ರೀ ಮಾರುತಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು ಇವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪವಿಭಾಗ ತುಮಕೂರು ಇವರ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ದಾವೆ (1) ನಂ.27/2008-2009, ದಿನಾಂಕ:18.10.2008 (2) ನಂ.28/2008-2009 ದಿನಾಂಕ:18.10.2008ರ ರೀತ್ಯಾ ಡಿಕ್ರಿ ಪಡೆದಿದ್ದು, ಈ ಡಿಕ್ರಿಯ ಪ್ರಕಾರ ಈ ಹಣದ ವಸೂಲಾತಿಗಾಗಿ ಅಮಲ್ಜಾರಿ ಅರ್ಜಿ ಹಾಕಿದ್ದು, ಅಮಲ್ಜಾರಿ ಅರ್ಜಿ (1) ಸಂಖ್ಯೆ:222/2008-2009, ದಿನಾಂಕ:16.01.2009, (2) ಸಂಖ್ಯೆ:223/2008-2009 ದಿನಾಂಕ:16.01.2009, ಪ್ರಕಾರ ಅಮಲ್ಜಾರಿ ಪಡೆದು, ಡಿಕ್ರಿಹೋಲ್ಡರ್ ಸಂಘದ ಮಾರಾಟಾಧಿಕಾರಿಗಳು ಅಂದರೆ ಮಾರಾಟಾಧಿಕಾರಿ ಕರ್ನಾಟಕ ರಾಜ್ಯ ಸಹಕಾರ ವಸತಿ ಮಹಾಮಂಡಲ ನಿ., ಬೆಂಗಳೂರು ಇವರಿಗೆ ವಹಿಸಿದ್ದು, ಮೇಲ್ಕಂಡ ತೀರ್ಪುಋಣಿಗಳಾದ ಶ್ರೀ ಎಸ್.ಕೃಷ್ಣ ಬಿನ್ ಸೀಬಿ ರಂಗಯ್ಯ ಮತ್ತು ಶ್ರೀಮತಿ ಜಯಲಕ್ಷ್ಮಿ, ಪ್ರಿಯಾಂಕ ಇಂಗ್ಲೀಷ್ ಸ್ಕೂಲ್, ಗೋಕುಲ ಬಡಾವಣೆ, ತುಮಕೂರು ರವರು ಡಿಕ್ರಿ ಹೋಲ್ಡರ್ ಸಂಘಕ್ಕೆ ಆಧಾರ ಮಾಡಿದ್ದ, ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:19.01.2010ರಂದು ಸಂಘಕ್ಕೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರಸ್ವತ್ತನ್ನು ಅತಿ ಹೆಚ್ಚಿನ ಬಿಡ್‌ದಾರರಾದ ಶ್ರೀ ಎ.ಎಂ. ವಿಜಯಕುಮಾರ್, ಬಿನ್ ಮಹಾಲಿಂಗಪ್ಪ, ಆಲದಹಳ್ಳಿ, ಬೆಳಗರಹಳ್ಳಿ ಅಂಚೆ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಇವರು ರೂ.21,00,000-00 (ಇಪ್ಪತ್ತೊಂದು ಲಕ್ಷ) ಗಳಿಗೆ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ.

ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀ ಎ.ಎಂ. ವಿಜಯಕುಮಾರ್ ಬಿನ್ ಮಹಾಲಿಂಗಪ್ಪ, ಆಲದಹಳ್ಳಿ, ಬೆಳಗರಹಳ್ಳಿ ಅಂಚೆ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ ಇವರು ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

1) ತುಮಕೂರು ಟೌನ್, ಬಡ್ಡಿಹಳ್ಳಿ, ಗೋಕುಲ ಬಡಾವಣೆ, ವಾರ್ಡ್ ನಂ.32 ರಲ್ಲಿನ ಖಾತೆ ನಂ.58/2154, ಸರ್ವೆ ನಂ.5:1ರ ಸೈಟ್ ನಂಬರ್ 17ಕ್ಕೆ ಚೆಕ್ಕುಬಂದಿ:

ಪೂರ್ವಕ್ಕೆ– ಸೈಟ್ ನಂ.18

ಪಶ್ಚಿಮಕ್ಕೆ– ಸೈಟ್ ನಂ.16

ಉತ್ತರಕ್ಕೆ– ಸೈಟ್ ನಂ.19 ಮತ್ತು 20ರ ಸೈಟ್‌ನಲ್ಲಿನ ಮನೆ

ದಕ್ಷಿಣಕ್ಕೆ– ಪೂಜಯ್ಯ ರವರ ಆಸ್ತಿ.

ಮತ್ತು ಅಳತೆ ಪೂರ್ವ–ಪಶ್ಚಿಮ 30 ಅಡಿಗಳು, ಉತ್ತರ–ದಕ್ಷಿಣ 52 ಅಡಿಗಳು ಪೂರ್ವದ ಕಡೆ, ಪಶ್ಚಿಮದ ಕಡೆ 53.5 ಅಡಿಗಳು.

ಒಟ್ಟು ವಿಸ್ತೀರ್ಣ 1590 ಚದರ ಅಡಿಗಳ ವಿಸ್ತೀರ್ಣದಲ್ಲಿ ಕಟ್ಟಡಸೇರಿ.

2) ತುಮಕೂರುಟೌನ್, ಬಡ್ಡಿಹಳ್ಳಿ, ಗೋಕುಲಬಡಾವಣೆ, ವಾರ್ಡ್ ನಂ.32ರಲ್ಲಿನ ಖಾತೆ ನಂ.59/2155, ಸರ್ವೆ ನಂ.5:1ರ ಸೈಟ್ ನಂಬರ್ 16ಕ್ಕೆ ಚೆಕ್ಕುಬಂದಿ:

ಪೂರ್ವಕ್ಕೆ– ಸೈಟ್ ನಂ.17

ಪಶ್ಚಿಮಕ್ಕೆ– ರಸ್ತೆ

ಉತ್ತರಕ್ಕೆ– ಸೈಟ್ ನಂ.20ರಲ್ಲಿನ ಮನೆ

ದಕ್ಷಿಣಕ್ಕೆ– ಪೂಜಯ್ಯ ರವರ ಆಸ್ತಿ.

ಮತ್ತು ಅಳತೆ ಪೂರ್ವ–ಪಶ್ಚಿಮ 35 ಅಡಿಗಳು, ಉತ್ತರ–ದಕ್ಷಿಣ 53.5 ಅಡಿಗಳು ಪೂರ್ವದ ಕಡೆ, ಪಶ್ಚಿಮದ ಕಡೆ 55 ಅಡಿಗಳು.

ಒಟ್ಟು ವಿಸ್ತೀರ್ಣ 1898.75 ಚದರ ಅಡಿಗಳ ವಿಸ್ತೀರ್ಣದಲ್ಲಿನ ಕಟ್ಟಡಸೇರಿ.

ಮಾರಾಟದ ಮೊತ್ತ ರೂ.21,00,000–00

ಮಾರಾಟದ ದಿನಾಂಕ:19.01.2010.

ಈ ದೃಢೀಕರಣ ಪತ್ರವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:03.03.2010 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ಪಿಆರ್–436 ತುಮಕೂರು ಉಪವಿಭಾಗ, ತುಮಕೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರ ಕಾರ್ಯಾಲಯ, ಸಾರ್ವಜನಿಕ ಕಛೇರಿಗಳ ಕಟ್ಟಡ, ನ್ಯೂ ಸಯ್ಯಾಜಿರಾವ್ ರಸ್ತೆ, ಮೈಸೂರು–570024**

**ವಿಷಯ:** ಶ್ರೀ ಎನ್. ಚಂದ್ರಶೇಖರ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಪಾಂಡವಪುರ ಇವರು ಕಛೇರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಜೆಆರ್‌ಎಂ/ಎ1/ಇಸಿಸಿ/12/97–98, ದಿನಾಂಕ:20.02.1998.

2) ಸಿವಿಲ್ ನ್ಯಾಯಾಧೀಶರು, ಜೂನಿಯರ್ ಡಿವಿಜನ್ ನ್ಯಾಯಾಲಯ, ಮೈಸೂರು ಇವರ ತೀರ್ಪು ದಿನಾಂಕ:18.11.2004.

3) ಸರ್ಕಾರದ ಪತ್ರ ಸಂಖ್ಯೆ:ಸಇ/406/ಎಸಸೇ/2009 ದಿನಾಂಕ:06.11.2009.

4) ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬ್ಬಂದಿ/52/ ಇಎನ್‌ಎನ್/2003–04, ದಿನಾಂಕ:08.01.2010.

**ಪ್ರಸ್ತಾವನೆ:**

ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ದಿವಂಗತ ಶ್ರೀ ಎನ್.ಚಂದ್ರಶೇಖರ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಪಾಂಡವಪುರ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(vii)ಮತ್ತು 8(viii)ರ ಸರ್ಕಾರದ ಸೇವೆಯಿಂದ ವಜಾ ಮಾಡಿ ಆದೇಶ ಹೊರಡಿಸಲಾಗಿತ್ತು.

ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ಉಲ್ಲೇಖ (4)ರ ಪತ್ರದಲ್ಲಿ ಮಹಾಲೇಖಪಾಲರ ಪತ್ರ ಸಂಖ್ಯೆ: ಪಿಎ-13/ಆರ್-4/ಡಿ17490/457/ ದಿನಾಂಕ:11.09.2009ರಲ್ಲಿ ದಿವಂಗತ ಶ್ರೀ ಎನ್.ಚಂದ್ರಶೇಖರ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಪಾಂಡವಪುರ ಇವರು ಗೌ: ಸಿವಿಲ್ ನ್ಯಾಯಾಲಯದ ದಿನಾಂಕ:18.11.2004ರ ಆದೇಶದಲ್ಲಿ ದಿವಂಗತ ಶ್ರೀ ಎನ್.ಚಂದ್ರಶೇಖರ್ ಇವರು ದಿನಾಂಕ:15.04.96ರಲ್ಲಿ ಮರಣ ಹೊಂದಿರುತ್ತಾರೆಂದು ತೀರ್ಪು ನೀಡಿರುತ್ತಾರೆಂದು ಈ ಕಛೇರಿಯಿಂದ ಹೊರಡಿಸಿರುವ ದಿನಾಂಕ:20.02.98ರ ಆದೇಶದ ಬಗ್ಗೆ ಆಕ್ಷೇಪಿಸಿರುತ್ತಾರೆಂದು ತಿಳಿಸಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರು ಉಲ್ಲೇಖ (4)ರ ಪತ್ರದಲ್ಲಿ ಉಲ್ಲೇಖ (3)ರ ಸರ್ಕಾರದ ಪತ್ರದಲ್ಲಿ ಮಹಾಲೇಖಪಾಲರ ಆಕ್ಷೇಪಣೆಯು ಸ್ವಯಂವೇದ್ಯವಾಗಿದ್ದು, ಈ ವಿಷಯವನ್ನು ಪರಿಶೀಲಿಸಿ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಮಂಜೂರಾತಿ ಆದೇಶ ಹೊರಡಿಸಲು ಅಗತ್ಯ ಕ್ರಮವಿಡಲು ಸೂಚಿಸಿರುತ್ತಾರೆ. ಮತ್ತು ದಿವಂಗತ ಶ್ರೀ ಎನ್. ಚಂದ್ರಶೇಖರ್ ಇವರು ನ್ಯಾಯಾಲಯದ ತೀರ್ಪಿನನ್ವಯ ದಿನಾಂಕ:15.04.1996ರಂದೇ ಮರಣ ಹೊಂದಿರುತ್ತಾರೆಂದು ಪರಿಗಣಿಸಿರುವುದರಿಂದ (Deemed dead) ಸದರಿಯವರನ್ನು ದಿನಾಂಕ:20.02.1998ರಂದು ಸೇವೆಯಿಂದ ವಜಾಗೊಳಿಸಿರುವ ಆದೇಶವು ನಿರರ್ಥಕವಾಗಿರುವುದರಿಂದ ಈ ವಜಾ ಆದೇಶವನ್ನು ವಾಪಸ್ಸು ಪಡೆದು ಈ ಬಗ್ಗೆ ಕ್ರಮಕೈಗೊಂಡು ಸಹಕಾರ ಸಂಘಗಳ ನಿಬಂಧಕರಿಗೆ ವರದಿ ಸಲ್ಲಿಸಲು ಸೂಚಿಸಿರುತ್ತಾರೆ.

ಮೇಲೆ ನಮೂದಿಸಿದ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಜೆಆರ್‌ಎಂ/ಎ1/ಇಸಿಸಿ/12/97-98, ದಿನಾಂಕ:22ನೇ ಫೆಬ್ರವರಿ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕಛೇರಿಯಿಂದ ಉಲ್ಲೇಖ (1)ರಲ್ಲಿ ದಿವಂಗತ ಶ್ರೀ ಎನ್.ಚಂದ್ರಶೇಖರ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಪಾಂಡವಪುರ ಇವರು ದಿನಾಂಕ:15.04.1996 ರಂದೇ ಮರಣ ಹೊಂದಿರುತ್ತಾರೆಂದು ನ್ಯಾಯಾಲಯವು ತೀರ್ಮಾನಿಸಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(vii) ಮತ್ತು 8(viii)ರ ಪ್ರಕಾರ ಸರ್ಕಾರದ ಸೇವೆಯಿಂದ ವಜಾ ಮಾಡಿರುವ ಆದೇಶವನ್ನು ಈ ಮೂಲಕ ವಾಪಸ್ಸು ಪಡೆಯಲಾಗಿರುತ್ತದೆ.

**ಬಿ.ಎಸ್. ಹರೀಶ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಮೈಸೂರು ಪ್ರಾಂತ, ಮೈಸೂರು.

ಪಿಆರ್-416

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉ)ವಲಯ, ಬಿಜಾಪುರ**

**ಅಧಿಸೂಚನೆ**

**ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಸಿ-2/09-10/1551, ದಿನಾಂಕ:11ನೇ ಮಾರ್ಚ್, 2010**

**ವಿಷಯ:** ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ ಕಛೇರಿಯಲ್ಲಿ ಮಾಹಿತಿಹಕ್ಕು ಅಧಿನಿಯಮ 2005ರಡಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸಹಾಯಕ ಮಾಹಿತಿ ಅಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಅಧಿಸೂಚನೆಯ ಸಮಸಂಖ್ಯೆ:4302 ದಿನಾಂಕ:01.08.2008.
2) ಈ ಕಛೇರಿಯ ಅಧಿಸೂಚನೆಯ ಸಮಸಂಖ್ಯೆ:677, ದಿನಾಂಕ:03.02.2009.
3) ಈ ಕಛೇರಿಯ ಅಧಿಸೂಚನೆಯ ಸಮಸಂಖ್ಯೆ:6422 ದಿನಾಂಕ:29.04.09.
4) ಸರ್ಕಾರದ ಅಧಿಸೂಚನೆ ಸಂಖ್ಯೆ:ಸನೀಇ:17:ಸೇಎಸು:2010, ದಿನಾಂಕ:04.03.2010.

ಸಾರ್ವಜನಿಕ ಮಾಹಿತಿ ಹಕ್ಕು ಅಧಿನಿಯಮ 2005 ರಡಿಯಲ್ಲಿ ಸೆಕ್ಷನ್ 5(1), 5(2) ಹಾಗೂ 19(1)ರಡಿಯಲ್ಲಿ ಉಲ್ಲೇಖ 1 ರಿಂದ 3ರ ವರೆಗೆ ಈ ಕಛೇರಿಯ ಅಧಿಸೂಚನೆಗಳನ್ವಯ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರದ ಅಧಿಕಾರಿಗಳನ್ನು ನೇಮಿಸಿ ಹೊರಡಿಸಲಾಗಿರುವ

ಅಧಿಸೂಚನೆಗಳನ್ನು ಉಲ್ಲೇಖ (4)ರ ಸರ್ಕಾರದ ಅಧಿಸೂಚನೆಯಂತೆ "ಮೇಲ್ಮನವಿ ಪ್ರಾಧಿಕಾರದ ಹುದ್ದೆ"ಯ ಅಧಿಕಾರಿಯವರ ಬದಲಾವಣೆಯಿಂದಾಗಿ ಭಾಗಶಃ ಮಾರ್ಪಡಿಸಿ ಈ ಕೆಳಗಿನಂತೆ ಅಧಿಸೂಚನೆ ಹೊರಡಿಸಲಾಗಿದೆ.

| ಕ್ರ.ಸಂ. | ಕಛೇರಿ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರಿ ಸೆಕ್ಷನ್ 19(1) |
|---|---|---|---|---|
| 1. | ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. | ಶ್ರೀ ಹೆಚ್.ಎಮ್. ಚಿದಾನಂದ, ಅಧೀಕ್ಷಕ ಅಭಿಯಂತರರು, ಮುಖ್ಯ ಇಂಜಿನೀಯರರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. | ಶ್ರೀ ಎ.ಎಂ. ಇನಾಮದಾರ, ಲೆಕ್ಕಾಧಿಕಾರಿಗಳು, (ಪ್ರಭಾರ) ಮುಖ್ಯ ಇಂಜಿನೀಯರರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. | ಶ್ರೀ ಹೆಚ್. ಸುರೇಶ್ ಮುಖ್ಯ ಇಂಜಿನೀಯರ್, (ಪ್ರಭಾರ) ಮುಖ್ಯ ಇಂಜಿನೀಯರರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. |

**ಹೆಚ್. ಸುರೇಶ್**
ಮುಖ್ಯ ಇಂಜಿನೀಯರರು,
ಸಣ್ಣ ನೀರಾವರಿ (ಉ) ವಲಯ, ಬಿಜಾಪುರ.

ಪಿಆರ್–434

**ಇಂಧನ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ:ಇಎನ್ 2 ಇಬಿಎಸ್ 2008, ಬೆಂಗಳೂರು, ದಿನಾಂಕ:10ನೇ ಮಾರ್ಚ್, 2010**

**ವಿಷಯ:** ದಿನಾಂಕ:01.01.2008ರಲ್ಲಿದ್ದಂತೆ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ವಿದ್ಯುತ್ ಪರಿವೀಕ್ಷಕರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** ಅಧಿಕೃತ ಜ್ಞಾಪನ ಸಂಖ್ಯೆ:ಇಎನ್ 2 ಇಬಿಎಸ್ 2008, ದಿನಾಂಕ:29.10.2009.

ಸರ್ಕಾರದ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ವಿದ್ಯುತ್ ಪರಿವೀಕ್ಷಕರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008 ರಲ್ಲಿದ್ದಂತೆ ಉಲ್ಲೇಖಿತ ದಿನಾಂಕ:29.10.2009ರ ಅಧಿಕೃತ ಜ್ಞಾಪನದಲ್ಲಿ ಪ್ರಕಟಿಸಲಾಗಿತ್ತು. ಜೇಷ್ಠತಾ ಕ್ರಮಾಂಕ ಹಾಗೂ ಇತರ ವಿಷಯಗಳ ಬಗ್ಗೆ ಆಕ್ಷೇಪಣೆ ಏನಾದರೂ ಇದ್ದಲ್ಲಿ ಸಂಬಂಧಪಟ್ಟವರು ಅವುಗಳನ್ನು ಪತ್ರ ಹೊರಡಿಸಿದ ಒಂದು ತಿಂಗಳಲ್ಲಿ ಸರ್ಕಾರಕ್ಕೆ ಮುಖ್ಯ ವಿದ್ಯುತ್ ಪರಿವೀಕ್ಷಕರ ಮೂಲಕ ಕಳುಹಿಸಿಕೊಡುವಂತೆ ಕೋರಲಾಗಿತ್ತು.

ಈ ಸಂಬಂಧ ವಿದ್ಯುತ್ ಪರಿವೀಕ್ಷಕರುಗಳಿಂದ ಆ ಹುದ್ದೆಯಲ್ಲಿ ಹಾಜರಾದ ದಿನಾಂಕ: ಹಾಗೂ ಜೇಷ್ಠತಾ ಪಟ್ಟಿಯಲ್ಲಿ ಪ್ರಕಟಿಸಿದಂತೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲ. ದಿನಾಂಕ:29.10.2009ರಂದು ಹೊರಡಿಸಿರುವ ತಾತ್ಕಾಲಿಕ ವಿದ್ಯುತ್ ಪರಿವೀಕ್ಷಕರುಗಳ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಲಾಗಿದೆ. ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008 ರಲ್ಲಿದ್ದಂತೆ ಅನುಬಂಧದಲ್ಲಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಜಾತಮ್ಮ**
ಪೀಠಾಧಿಕಾರಿ,
ಇಂಧನ ಇಲಾಖೆ.

ಪಿಆರ್–462

**ಕರ್ನಾಟಕ ಸರ್ಕಾರ**

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಸಂ: ಸಿಬ್ಬಂದಿ–1 / ಮಾಹಿತಿ ಹಕ್ಕು ಕೈಪಿಡಿ (2008–09), ದಿನಾಂಕ:3ನೇ ಫೆಬ್ರವರಿ, 2010**

**ಸುತ್ತೋಲೆ**

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5(1) ರ ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯ ವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ ಸಿ.ಬಿ.ಎಸ್/ ಮಾಹಿತಿ ಹಕ್ಕು

ಕೈಪಿಡಿ/2005 ಇ.ಎಸ್.ಎಲ್./05–06 ದಿನಾಂಕ:19/9/2005ರ ಪ್ರಕಾರ ಸಹಾಯಕ ಕಾರ್ಯಪಾಲಕ ಅಭಿಯಂತರರುರವರಾದ ಶ್ರೀ ವೈ ಕೃಷ್ಣರಾವ್, ರಾಷ್ಟ್ರೀಯ ಹೆದ್ದಾರಿ ಉಪವಿಭಾಗ, ಕುಂದಾಪುರ ಇವರು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ.) ನೇಮಕಗೊಂಡಿದ್ದು ಮಾಹಿತಿ ನೀಡುವ ಪ್ರಕ್ರಿಯೆಯು ಸುಲಲಿತವಾಗಿ ನಡೆಯಲು ಅನುಕೂಲವಾಗುವಂತೆ ಶ್ರೀ ಆರ್.ಶಿವಣ್ಣ, ಸಹಾಯಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ಉಪವಿಭಾಗ, ಕುಂದಾಪುರ ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ.)ಯಾಗಿ ನೇಮಕಗೊಳಿಸಲಾಗಿದೆ.

ಈ ಕಛೇರಿಯ ಮಾಹಿತಿಗಳನ್ನು ಸಾರ್ವಜನಿಕರಿಗೆ ನೀಡುವ ಸಲುವಾಗಿ ಮಾಹಿತಿ ಹಕ್ಕು ಕೈಪಿಡಿ 2005ನ್ನು ಈ ಮೂಲಕ ಪರಿಷ್ಕರಿಸಿ ಪ್ರಕಟಿಸಿದೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ,
ಕುಂದಾಪುರ.

**ಪ್ರಕಟಣೆ**

| | |
|---|---|
| 1. | ಮಾಹಿತಿ ಪಡೆಯಲು ಹಕ್ಕು ನಿಯಮ, ನಿಯಮಗಳು 2005 ರ ದಿನಾಂಕ: 11–10–2005ರ ಮತ್ತು ಪರಿಷ್ಕರಣೆ ದಿನಾಂಕ: 31–5–2008 ರಲ್ಲಿ ಇದ್ದಂತೆ. |
| 2. | ಮಾಹಿತಿ ಕೋರಿಕೆ ಅರ್ಜಿಗಳನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸಬೇಕು ಅರ್ಜಿ ನಮೂನೆಯಲ್ಲಿ ಉಚಿತವಾಗಿ ಈ ಕಛೇರಿಯ ಸಾರ್ವಜನಿಕ ಮಾಹಿತಿ ಹಕ್ಕು ವಿಭಾಗದಿಂದ ಪಡೆಯಬಹುದು. |
| 3. | ಸರಿಯಾಗಿ ಭರ್ತಿ ಮಾಡಿದ ಅರ್ಜಿಯನ್ನು ಕಛೇರಿಯ ಸಾರ್ವಜನಿಕ ಟಪಾಲು ಸ್ವೀಕೃತಿ ವಿಭಾಗದಲ್ಲಿ ಸಲ್ಲಿಸಬೇಕು. ಮತ್ತು ಸ್ವೀಕೃತಿಯನ್ನು ತಪ್ಪದೇ ಪಡೆಯಬೇಕು. ಮತ್ತು ರೂ. 10.00 ಅರ್ಜಿ ಶುಲ್ಕವನ್ನು ಪಾವತಿಸತಕ್ಕದ್ದು. |
| 4. | ಅರ್ಜಿಯಲ್ಲಿ ಕೋರಿದ ಮಾಹಿತಿಯನ್ನು ಒದಗಿಸಲು ಅವಕಾಶವಿದ್ದು ಸಂದಾಯ ಮಾಡಬೇಕಾದ ಶುಲ್ಕದ ಮಾಹಿತಿಯನ್ನು ನಿಮಗೆ 7 ದಿನಗಳ ಒಳಗೆ ತಿಳಿಸಲಾಗುವುದು. |
| 5. | ಶುಲ್ಕ ಪಾವತಿಸಿದ ದಿನಾಂಕದಿಂದ 30 ದಿನಗಳೊಳಗೆ ಕೋರಿದ ಮಾಹಿತಿಯನ್ನು ಒದಗಿಸಲಾಗುತ್ತದೆ. |
| 6. | ಅರ್ಜಿಯಲ್ಲಿ ಕೋರಿದ ಮಾಹಿತಿಯನ್ನು ಒದಗಿಸಲು ಅವಕಾಶವಿದ್ದಲ್ಲಿ 15 ದಿನಗಳೊಳಗೆ ತಿಳಿಸಲಾಗುವುದು. |
| 7. | ನಿಗದಿತ ಕಾಲಾವಧಿಯಲ್ಲಿ ಮಾಹಿತಿ ಅಥವಾ ಸೂಚನೆ ನೀಡದಿದ್ದಲ್ಲಿ ಅಥವಾ ಆದೇಶದಿಂದ ಅರ್ಜಿದಾರರು ಬಾಧಿತರಾದಲ್ಲಿ 30 ದಿನಗಳ ಒಳಗೆ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿ ಸಲ್ಲಿಸಬಹುದು. |
| 8. | ಮಾಹಿತಿ ನೀಡಲು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಮಂಗಳೂರು ಇವರು ಸಕ್ಷಮ ಪ್ರಾಧಿಕಾರಿಯಾಗಿರುತ್ತಾರೆ. |
| 9. | ಮೇಲ್ಮನವಿ ಸಲ್ಲಿಸಲು ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಇವರು ಮೇಲ್ಮನವಿ ಪ್ರಾಧಿಕಾರಿಯಾಗಿರುತ್ತಾರೆ. |
| 10. | ಹೆಚ್ಚಿನ ವಿವರಗಳಿಗೆ ಮೇಲ್ಕಂಡ ಅಧಿಕಾರಿಗಳನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು. |

ದಿನಾಂಕ:
ಸ್ಥಳ: ಕುಂದಾಪುರ

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ,
ಕುಂದಾಪುರ.

**ನಮೂನೆ**

**ಕರ್ನಾಟಕ ಸರ್ಕಾರ**

**ಮಾಹಿತಿ ಹಕ್ಕು ಅಧಿನಿಯಮ 2005 (ಕೇಂದ್ರ ಕಾಯ್ದೆ ಸೆಕ್ಷನ್ – 22)**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕುಂದಾಪುರ**

ಮಾಹಿತಿ ಹಕ್ಕು ಅಧಿನಿಯಮ 2005 ಸೆಕ್ಷನ್ 5(2) ಮತ್ತು 19(1) ರ ಅಡಿಯಲ್ಲಿ ಈ ಕಛೇರಿಯಿಂದ ನೇಮಿಸಲಾದ ಅಧಿಕಾರಿಗಳು ಸಾರ್ವಜನಿಕ ಸಂಪರ್ಕ ಅಧಿಕಾರಿಗಳಾಗಿರುತ್ತಾರೆ.

ಈ ಕಛೇರಿಯಲ್ಲಿ ಮಾಹಿತಿ ದಾಖಲಾತಿಗಳನ್ನು ನೀಡುವ ಅಧಿಕಾರಿಗಳು ಸಾರ್ವಜನಿಕ ಮಾಹಿತಿ ಅಧಿಕಾರ ಸೆಕ್ಷನ್ 5(1) ರ ಪ್ರಕಾರ

| **ಅಧಿಕಾರಿ ಹೆಸರು** | **ಪದನಾಮ** |
|---|---|
| 1) ಶ್ರೀ. ವೈ. ಕೃಷ್ಣ ರಾವ್ | ಸಹಾಯಕ ಕಾರ್ಯಪಾಲಕ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕುಂದಾಪುರ. |

ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) ರ ಪ್ರಕಾರ

| **ಅಧಿಕಾರಿ ಹೆಸರು** | **ಪದನಾಮ** |
|---|---|
| 1) ಶ್ರೀ ಆರ್. ಶಿವಣ್ಣ | ಸಹಾಯಕ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕುಂದಾಪುರ. |

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದ ಪಕ್ಷದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ವಿಭಾಗ
ಮಂಗಳೂರು.

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ,
ಕುಂದಾಪುರ.

**ಸುವರ್ಣ ಕರ್ನಾಟಕ 2005**

**ಕರ್ನಾಟಕ ಸರ್ಕಾರ**

**(ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ)**

**ಮಾಹಿತಿ ಹಕ್ಕು ಕೈಪಿಡಿ 2005**

**ಸೆಕ್ಷನ್ 4(1) (ಬಿ) ಅನ್ವಯ**

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕುಂದಾಪುರ

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ನಿಯಮ 2005 ರ ಸೆಕ್ಷನ್ 5(1) ರ ಪ್ರಕಾರ ಶ್ರೀ. ವೈ. ಕೃಷ್ಣ ರಾವ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ.) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 2–09–08ರಿಂದ ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕುಂದಾಪುರ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ನಿಯಮ 2005 ರ ಸೆಕ್ಷನ್ 5(1) ರ ಪ್ರಕಾರ ಶ್ರೀ ಆರ್.ಶಿವಣ್ಣ, ಸಹಾಯಕ ಇಂಜಿನಿಯರ್, ಆದ ನಾನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ.) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 2–09–08ರಿಂದ ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಸಹಾಯಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕುಂದಾಪುರ.

**ಕರ್ನಾಟಕ ಸರ್ಕಾರ**

**ರಾಷ್ಟ್ರೀಯ ಹೆದ್ದಾರಿ ಉಪವಿಭಾಗ, ಕುಂದಾಪುರ**

**ಮಾಹಿತಿ ಹಕ್ಕು ಕೈಪಿಡಿ – 2005 ಸೆಕ್ಷನ್ 4(1) (ಬಿ) ಅನ್ವಯ**

**1 ಸಂಸ್ಥೆಯ ಬಗ್ಗೆ ವಿವರಗಳು, ಕಾರ್ಯಗಳು, ಮತ್ತು ಕರ್ತವ್ಯಗಳು**

ಅ. ಸಂಸ್ಥೆಯ ಹೆಸರು – ರಾಷ್ಟ್ರೀಯ ಹೆದ್ದಾರಿ ಉಪವಿಭಾಗ, ಕುಂದಾಪುರ

ಆ. ರಚನೆ – ಈ ಕೆಳಕಂಡಂತಿದೆ.

**ಸಹಾಯಕ ಕಾರ್ಯಪಾಲಕ ಇಂಜಿನಿಯರ್**

| ತಾಂತ್ರಿಕ ಶಾಖೆ | ಆಡಳಿತ ಶಾಖೆ |
|---|---|
| ಸಹಾಯಕ ಇಂಜಿನಿಯರ್ – 3 | ಪ್ರಥಮ ದರ್ಜೆ ಸಹಾಯಕರು – ಖಾಲಿ |
| ಕಿರಿಯ ಇಂಜಿನಿಯರ್ – 1 | ದ್ವಿತಿಯ ದರ್ಜೆ ಸಹಾಯಕರು – 1 |
| ಕಿರಿಯ ಇಂಜಿನಿಯರ್ – ಖಾಲಿ | ದ್ವಿತಿಯ ದರ್ಜೆ ಸಹಾಯಕರು – ಖಾಲಿ |
| | ಜವಾನರು – 2 |

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ
ಕುಂದಾಪುರ

**2 ನಿಯೋಜನೆ ಮೇಲೆ ಇರುವ ನೌಕರರು:–** ಕಿರಿಯ ಇಂಜಿನಿಯರ್ – 1

**3 ಕಾರ್ಯಗಳು ಮತ್ತು ಕರ್ತವ್ಯಗಳು:–**

ಕುಂದಾಪುರ/ಉಡುಪಿ/ತೀರ್ಥಹಳ್ಳಿ/ಶೃಂಗೇರಿ/ಕೊಪ್ಪ ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಹೆದ್ದಾರಿಗಳ ನಿರ್ವಹಣೆ, ಅವುಗಳ ಮೇಲಿನ ಸೇತುವೆಗಳ ನಿರ್ಮಾಣ ಮತ್ತು ನಿರ್ವಹಣೆಯನ್ನು ನಿರ್ವಹಿಸಲಾಗುತ್ತದೆ.

**4 ಅಧಿಕಾರಿ ಮತ್ತು ಸಿಬ್ಬಂದಿ: ಅಧಿಕಾರ ಮತ್ತು ಕರ್ತವ್ಯಗಳು**

**1) ಸಹಾಯಕ ಕಾರ್ಯಪಾಲಕ ಇಂಜಿನಿಯರ್:–**

ಕುಂದಾಪುರ ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗದ ವ್ಯಾಪ್ತಿಗೆ ಒಳಪಟ್ಟಂತೆ ಕುಂದಾಪುರ ಉಪ ವಿಭಾಗದ ಮುಖ್ಯಸ್ಥರಾಗಿದ್ದು, ಸರ್ಕಾರಿ ನಿಯಮಗಳ ಚೌಕಟ್ಟಿನಲ್ಲಿ ಹಾಗೂ, ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಗಳಿಗೆ ಸಂಬಂಧಪಟ್ಟ ಪ್ರಕರಣಗಳ ವಿಲೇವಾರಿ ಮತ್ತು ಎಲ್ಲಾ ವ್ಯವಹಾರದ ಮತ್ತು ನಿಯಂತ್ರಣ ಅಧಿಕಾರ ಹೊಂದಿರುತ್ತಾರೆ.

**2) ಸಹಾಯಕ ಇಂಜಿನಿಯರ್:– 1**

ರಾಷ್ಟ್ರೀಯ ಹೆದ್ದಾರಿ 17ರ ಕಿ.ಮೀ. 283.00 ರಿಂದ ಕಿ.ಮೀ. 325.00 ರವರೆಗಿನ ರಸ್ತೆ ಕಾಮಗಾರಿಗಳು ತಾಂತ್ರಿಕ ಪತ್ರ ವ್ಯವಹಾರ, ಟೆಂಪೋ ಟ್ರ್ಯಾಕ್ಸ್ ಕೆಎ 01 ಜಿ 766 ಮತ್ತು ಟಿಪ್ಪರ್ ಎಂವೈಜಿ 5820ರ ನಿರ್ವಹಣೆ ಮತ್ತು ಸಿಆರ್‌ಎಫ್ ಕಾಮಗಾರಿ ಹಾಗೂ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್ ನಿರ್ದೇಶಿಸುವ ಇತರ ಕೆಲಸಗಳು

**3) ಸಹಾಯಕ ಇಂಜಿನಿಯರ್:– 2**

ರಾಷ್ಟ್ರೀಯ ಹೆದ್ದಾರಿ 17ರ ಕಿ.ಮೀ. 241.00 ರಿಂದ ಕಿ.ಮೀ. 283.00 ರವರೆಗಿನ ರಸ್ತೆ ಕಾಮಗಾರಿಗಳು ಸಿಆರ್‌ಎಫ್ ಕಾಮಗಾರಿ ಹಾಗೂ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್ ನಿರ್ದೇಶಿಸುವ ಇತರ ಕೆಲಸಗಳು

**4) ಸಹಾಯಕ ಇಂಜಿನಿಯರ್:– 3**

ರಾಷ್ಟ್ರೀಯ ಹೆದ್ದಾರಿ 13ರ ಕಿ.ಮೀ. 590.00 ರಿಂದ ಕಿ.ಮೀ. 664.00 ರವರೆಗಿನ ರಸ್ತೆ ಕಾಮಗಾರಿಗಳು ಹಾಗೂ ಸಿಆರ್‌ಎಫ್ ಅಡಿಯಲ್ಲಿ ಬರುವ ರಸ್ತೆ ಅಭಿವೃದ್ಧಿ ಕಾಮಗಾರಿ ಹಾಗೂ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್ ನಿರ್ದೇಶಿಸುವ ಇತರ ಕೆಲಸಗಳು

**ಪ್ರಥಮ ದರ್ಜೆ ಸಹಾಯಕರು:– ಖಾಲಿ ಹುದ್ದೆ**

**ದ್ವಿತಿಯ ದರ್ಜೆ ಸಹಾಯಕರು:– 1**

ಕಾಮಗಾರಿ ನಗದು ಪುಸ್ತಕದ ನಿರ್ವಹಣೆ, ಆಡಳಿತ ಶಾಖೆಯ ನಿರ್ವಹಣೆ, ಹಾಜರಾತಿ ಪುಸ್ತಕ ಹಾಗೂ ನೌಕರರ ರಜೆಯ ಕಡತವನ್ನು ನಿರ್ವಹಿಸುವುದು ಹಾಗೂ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವಹಿಸುವ ಇತರ ಕೆಲಸಗಳನ್ನು ನಿರ್ವಹಿಸುವುದು.

ಸಿಬ್ಬಂದಿ ವರ್ಗದ ವೇತನ ಬಿಲ್ಲನ್ನು ತಯಾರಿಸುವುದು. ಮಾಸಿಕ ವರದಿ ಸಲ್ಲಿಸುವುದು. ಸಿಬ್ಬಂದಿ ವರ್ಗದ ಸೇವಾ ಪುಸ್ತಕ ನಿರ್ವಹಿಸುವುದು ಹಾಗೂ ಉಪವಿಭಾಗದ ಉಗ್ರಾಣ ಖಾತೆಯನ್ನು ನಿರ್ವಹಿಸುವುದು. ಹಾಗೂ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರು ವಹಿಸುವ ಇತರ ಕೆಲಸಗಳನ್ನು ನಿರ್ವಹಿಸುವುದು.

ಆಮದು ವಹಿ, ರಫ್ತು ವಹಿ ಮತ್ತು ಸ್ಟಾಂಪ್ ವಹಿಗಳ ನಿರ್ವಹಣೆ ಹಾಗೂ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರು ವಹಿಸುವ ಇತರ ಕೆಲಸಗಳನ್ನು ನಿರ್ವಹಿಸುವುದು.

ಸಿಬ್ಬಂದಿ ವರ್ಗದ ಪ್ರಯಾಣ ಭತ್ಯೆಯ ದಿನಚರಿಯನ್ನು ಸಿದ್ಧಪಡಿಸುವುದು ಹಾಗೂ ಪ್ರಯಾಣ ಭತ್ಯೆಯ ಬಿಲ್ಲನ್ನು ತಯಾರಿಸುವುದು. ಹಾಗೂ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರು ವಹಿಸುವ ಇತರ ಕೆಲಸಗಳನ್ನು ನಿರ್ವಹಿಸುವುದು.

**ದ್ವಿತಿಯ ದರ್ಜೆ ಸಹಾಯಕರು:– ಖಾಲಿ ಹುದ್ದೆ**

**ಜವಾನ 1 ಮತ್ತು 2:–**

ಕಛೇರಿಯ ಎಲ್ಲಾ ಕೊಠಡಿಗಳ ಸ್ವಚ್ಛತೆಯ ನಿರ್ವಹಣೆ. ಕಡತ, ಟಪಾಲು ಇತ್ಯಾದಿಗಳನ್ನು ಶಾಖೆಯೊಳಗೆ ಮತ್ತು ಹೊರಗೆ ತಲುಪಿಸುವುದು. ಹಾಗೂ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರು ವಹಿಸುವ ಇತರ ಕೆಲಸಗಳನ್ನು ನಿರ್ವಹಿಸುವುದು.

**5) ಸೂಪರ್ ನ್ಯೂಮರರಿ ಹುದ್ದೆ:–**

**1) ಕೆಲಸ ನಿರೀಕ್ಷಕರು:**

ಕಛೇರಿಯಲ್ಲಿ ಶಾಖಾಧಿಕಾರಿಯವರು ವಹಿಸಿರುವ ಕೆಲಸವನ್ನು ನಿರ್ವಹಿಸುವುದು. ಹಾಗೂ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರು ವಹಿಸುವ ಇತರ ಕೆಲಸಗಳನ್ನು ನಿರ್ವಹಿಸುವುದು.

**2) ವಾಹನ ಚಾಲಕ:**

ಕಚೇರಿಯ ವಾಹನ ಚಲಾಯಿಸುವುದು

**6) ಕಾರ್ಯಗಳನ್ನು ನಿರ್ವಹಿಸುವವರಿಗೆ ಅನುಸರಿಸುವ ಮಾನ ದಂಡಗಳು:**

ಕೆ.ಪಿ.ಡಬ್ಲ್ಯೂ.ಡಿ. ಕೋಡ್ ಮತ್ತು ಕೆ.ಪಿ.ಡಬ್ಲ್ಯೂ.ಡಿ. ಎ ಕೋಡ್ ಕರ್ನಾಟಕ ಆಕ್ಟ್ 2002ರಲ್ಲಿ ನಿಗದಿ ಪಡಿಸಿರುವ ಮಾನದಂಡಗಳನ್ನು ಅನುಸರಿಸುವುದು.

7) **ಕಾರ್ಯಗಳನ್ನು ನಿರ್ವಹಿಸುವಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು:– ನಿಬಂಧನೆಗಳು, ಸೂಚನೆಗಳು, ಕೈಪಿಡಿ ಮತ್ತು ದಾಖಲೆಗಳು.**

1) ಕರ್ನಾಟಕ ನಾಗರಿಕ ಸೇವಾ ನಿಯಮಗಳು 1958

2) ಕರ್ನಾಟಕ ಆರ್ಥಿಕ ಸಂಹಿತೆ ನಿಯಮ

3) ಖಜಾನೆ ಸಂಹಿತೆ

4) ಸಾದಿಲ್ವಾರು ವೆಚ್ಚದ ಕೈಪಿಡಿ

5) ಕೆ.ಪಿ.ಡಬ್ಲ್ಯೂ.ಡಿ. ಎ ಕೋಡ್

6) ಕೆ.ಪಿ.ಡಬ್ಲ್ಯೂ.ಡಿ. ಡಿ ಕೋಡ್

7) ಕರ್ನಾಟಕ ನಾಗರಿಕ ಸೇವೆಗಳು (ನಡತೆ ನಿಯಮಗಳು 1966)

8) ಕರ್ನಾಟಕ ನಾಗರಿಕ ಸೇವೆಗಳು (ಸಿ.ಪಿ.ಎ.) ನಿಯಮಗಳು 1957

9) ಕಾರ್ಯಾಲಯದ ಕೈಪಿಡಿ

10) ಉಗ್ರಾಣದ ಕೈಪಿಡಿ

11) ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ನಿಯಮಗಳು (ಆದೇಶ 2–2–2001)

12) ಸೇವಾ ನಿಯಮಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಆಡಳಿತ ಸುಧಾರಣೆ, ಇಲಾಖೆ, ಆರ್ಥಿಕ ಇಲಾಖೆ, ಲೋಕೋಪಯೋಗಿ ಇಲಾಖೆ ಹೊರಡಿಸಿದ ಆದೇಶದ ಸುತ್ತೋಲೆ ಸೂಚನೆಗಳು

13) ಇಲಾಖೆ ಮುಖ್ಯಸ್ಥರು ಹೊರಡಿಸಿದ ಸುತ್ತೋಲೆ ಮತ್ತು ಆದೇಶಗಳು

**8) ಇಲಾಖೆಯು ಹೊಂದಿರುವ ದಸ್ತಾವೇಜುಗಳ ಪಟ್ಟಿ:**

1) ವಿಷಯ ವಹಿ/ಸಿಬ್ಬಂದಿ ವಹಿ

2) ವಿಧಾನ ಸಭೆ:– ವಿಧಾನ ಪರಿಷತ್ ಪ್ರಶ್ನೆಗಳಿಗೆ ಸಂಬಂಧಿಸಿದ ರಿಜಿಸ್ಟರ್

3) ನ್ಯಾಯಾಲಯ: ಕೆ.ಎ.ಟಿ. ಕಾರ್ಮಿಕ ಪ್ರಕರಣಗಳ ರಿಜಿಸ್ಟರ್

4) ವೇತನ ಬಟಾವಡೆ ರಿಜಿಸ್ಟರ್
5) ಪ್ರಯಾಣ ಭತ್ಯೆ ರಿಜಿಸ್ಟರ್
6) ಎನ್ ಕ್ಯಾಷ್‌ಮೆಂಟ್ ರಿಜಿಸ್ಟರ್
7) ಕಛೇರಿ ಆದೇಶ ಪುಸ್ತಕ
8) ಹಾಜರಿ ಪುಸ್ತಕ
9) ಕಾಮಗಾರಿ ನಗದು ಪುಸ್ತಕ
10) ಸಾಮಾನ್ಯ ನಗದು ಪುಸ್ತಕ
11) ಎಸ್.ಬಿ.ಆರ್. ರಿಜಿಸ್ಟರ್
12) ದಾಸ್ತಾನು ಸ್ವೀಕೃತಿ ವಹಿ
13) ದಾಸ್ತಾನು ವಿತರಣ ವಹಿ
14) ದಾಸ್ತಾನು ಶುಲ್ಕದ ವಹಿ
15) ಟಿ. ಅಂಡ್ ಪಿ ಸ್ವೀಕೃತಿ ವಹಿ
16) ಟಿ. ಅಂಡ್ ಪಿ ವಿತರಣಾ ವಹಿ
17) ಅಳತೆ ಪುಸ್ತಕ ಸ್ವೀಕೃತಿ ಮತ್ತು ವಿತರಣಾ ವಹಿ
18) ಅರ್ಧ ವಾರ್ಷಿಕ ದಾಸ್ತಾನ್ ವಹಿ
19) ವಾರ್ಷಿಕ ಟಿ. ಅಂಡ್ ಪಿ ವಹಿ
20) ಮೋರಿ ರಿಜಿಸ್ಟರ್
21) ಲಾಗ್ ಪುಸ್ತಕ
22) ಅಂದಾಜು ಪಟ್ಟಿ ಮಂಜೂರಾತಿ ವಹಿ
23) ಆಮದು ವಹಿ
24) ರವಾನೆ ವಹಿ/ ಮುದ್ದಾಂ ವಹಿ
25) ಸ್ಟಾಂಪ್ ರಿಜಿಸ್ಟರ್
26) ಸಾಂದರ್ಭಿಕ ರಜಾ ವಹಿ
27) ರಿಕವರಿ ರಿಜಿಸ್ಟರ್
28) ಅಧಿಕಾರಿ ಮತ್ತು ಸಿಬ್ಬಂದಿಯ ಸ್ವಂತ ವಿಳಾಸದ ವಹಿ
29) ರೆಮಿಟನ್ಸ್ ರಿಜಿಸ್ಟರ್

**9) ರಾಷ್ಟ್ರೀಯ ಹೆದ್ದಾರಿ ಉಪವಿಭಾಗ, ಕುಂದಾಪುರದ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರ ನಿರ್ದೇಶನ:–**

| ಕ್ರ. ಸಂ. | ಅಧಿಕಾರಿ ನೌಕರರ ಹೆಸರು | ಹುದ್ದೆ | ಕಛೇರಿ ವಿಳಾಸ | ದೂರವಾಣಿ ಸಂಖ್ಯೆ |
|---|---|---|---|---|
| 1 | ಶ್ರೀ. ವೈ ಕೃಷ್ಣರಾವ್ | ಸ.ಕಾ.ಇಂಜಿನಿಯರ್ | ಸಹಾಯಕ ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಕುಂದಾಪುರ. | 230530 |

| ಕ್ರ. ಸಂ. | ಅಧಿಕಾರಿ ನೌಕರರ ಹೆಸರು | ಹುದ್ದೆ | ಕಛೇರಿ ವಿಳಾಸ | ದೂರವಾಣಿ ಸಂಖ್ಯೆ |
|---|---|---|---|---|
| 2 | ಶ್ರೀ. ಆರ್ ಶಿವಣ್ಣ | ಸ.ಇಂಜಿನಿಯರ್ | – ಅದೆ – | 230530 |
| 3 | ಶ್ರೀ. ಸಿ. ಎಂ. ದಿವಾಕರ್ | ಸ.ಇಂಜಿನಿಯರ್ | – ಅದೆ – | 230530 |
| 4 | ಶ್ರೀ. ಕೆ. ಮಂಜುನಾಥ ನಾಯಕ್ | ಸ.ಇಂಜಿನಿಯರ್ | – ಅದೆ – | 230530 |
| 5 | ಶ್ರೀ ಮುಕುಂದ ಹೆಚ್ ಮಡಿವಾಳ | ದ್ವಿ.ದ.ಸ. | – ಅದೆ – | 230530 |
| 6 | ಶ್ರೀ ಬಿ.ಎಂ. ಮೊಹಮ್ಮದ್ ಅನ್ವರ್ | ಕಿ.ಕೆ. ನಿರೀಕ್ಷಕರು. | – ಅದೆ – | 230530 |
| 7 | ಶ್ರೀ ಎಸ್. ರಾಜೀವ ನಾಯ್ಕ | ಗ್ರೂಪ್ ಡಿ | – ಅದೆ – | 230530 |
| 8 | ಶ್ರೀ ಯೋಗೀಶ್ | ಗ್ರೂಪ್ ಡಿ | – ಅದೆ – | 230530 |
| 9 | ಶ್ರೀ ಎನ್ ವೀರಭದ್ರ | ವಾಹನ ಚಾಲಕ | – ಅದೆ – | 230530 |

**9) ನಿಯಮಾನುಸಾರವಾಗಿ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಪಡೆಯುತ್ತಿರುವ ಮಾಸಿಕ ವೇತನದ ವಿವರಗಳು**

**ರಾಷ್ಟ್ರೀಯ ಹೆದ್ದಾರಿ ಉಪವಿಭಾಗ, ಕುಂದಾಪುರದ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರ ನಿರ್ದೇಶನ:–**

| ಕ್ರ. ಸಂ. | ಅಧಿಕಾರಿ ನೌಕರರ ಹೆಸರು | ಹುದ್ದೆ | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1 | ಶ್ರೀ. ವೈ ಕೃಷ್ಣರಾವ್ | ಸ.ಕಾ.ಇಂಜಿನಿಯರ್ | 14050–25050 | 25050 |
| 2 | ಶ್ರೀ. ಆರ್ ಶಿವಣ್ಣ | ಸ.ಇಂಜಿನಿಯರ್ | 14050–25050 | 21075 |
| 3 | ಶ್ರೀ. ಸಿ. ಎಂ. ದಿವಾಕರ್ | ಸ.ಇಂಜಿನಿಯರ್ | 11400–21600 | 13700 |
| 4 | ಶ್ರೀ. ಕೆ. ಮಂಜುನಾಥ ನಾಯಕ್ | ಸ.ಇಂಜಿನಿಯರ್ | 11400–21600 | 11700 |
| 5 | ಶ್ರೀ ಮುಕುಂದ ಹೆಚ್ ಮಡಿವಾಳ | ದ್ವಿ.ದ.ಸ. | 5800–10500 | 6800 |
| 6 | ಶ್ರೀ ಬಿ.ಎಂ. ಮೊಹಮ್ಮದ್ ಅನ್ವರ್ | ಕಿ.ಕೆ. ನಿರೀಕ್ಷಕರು. | 7275–13350 | 12650 |
| 7 | ಶ್ರೀ ಎಸ್. ರಾಜೀವ ನಾಯ್ಕ | ಗ್ರೂಪ್ ಡಿ | 5500–9500 | 7800 |
| 8 | ಶ್ರೀ ಯೋಗೀಶ್ | ಗ್ರೂಪ್ ಡಿ | 4800–7275 | 4800 |
| 9 | ಶ್ರೀ ಎನ್ ವೀರಭದ್ರ | ವಾಹನ ಚಾಲಕ | 5800–10500 | 9750 |

**10) 2007–08ನೇ ಸಾಲಿನ ಆಯ ವ್ಯಯದಲ್ಲಿ ರಾಷ್ಟ್ರೀಯ ಹೆದ್ದಾರಿ ಉಪವಿಭಾಗದ ವಿವಿಧ ಯೋಜನಾವಾರು ವಿವಿಧ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ನಿಗದಿ ಪಡಿಸಲಾದ ಅನುದಾನದ ವಿವರಗಳು 2007 ನೇ ಸಾಲಿನ ರಾಷ್ಟ್ರೀಯ ಹೆದ್ದಾರಿ ಕಾಮಗಾರಿಗಳಿಗೆ ಒದಗಿಸಲಾದ ಅನುದಾನದ ವಿವರ.**

**11) 2008–09 ರ ಸಾಲಿನಲ್ಲಿ ರಾಷ್ಟ್ರೀಯ ಹೆದ್ದಾರಿ ಉಪವಿಭಾಗ ಕುಂದಾಪುರಕ್ಕೆ ಕಾಮಗಾರಿಗಳಿಗೆ ಒದಗಿಸಲಾದ ಅನುದಾನದ ವಿವರ.**

| ಕ್ರ. ಸಂ. | ಲೆಕ್ಕ ಶೀರ್ಷಿಕೆ | 2008–09ರ ಅನುದಾನದ ರೂ. ಲಕ್ಷಗಳಲ್ಲಿ |
|---|---|---|
| 1 | 3054 (ರಾಜ್ಯ) ಹೆದ್ದಾರಿ ನಿರ್ವಹಣೆ | 0.77 |
| 2 | 5054/Road Bridge/ | 7.15 crores |
| 3 | 5054/Road Bridge/ | 11.82 crores |
| 4 | 5054/Road Bridge/ | 20.00 crores |
| 5 | 5054/Road Bridge/ | 32.00 crores |
| 6 | Construction of Minor Bridge/5054 plan Road/Bridge | 0.9092 Lakhs |

**12)** ಸಾರ್ವಜನಿಕ ಮಾಹಿತಿ ಅಧಿಕಾರಿ ಹೆಸರು ಮತ್ತು ಹುದ್ದೆ ಇತ್ಯಾದಿ ವಿವರಗಳು ಮಾಹಿತಿ ಹಕ್ಕು ಅಧಿನಿಯಮದ 2005–(ಕೇಂದ್ರ ಅಧಿನಿಯಮ ಸಂ.22)ರ ಸೆಕ್ಷನ್ 5(1) 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಷ್ಟ್ರೀಯ ಹೆದ್ದಾರಿ ಉಪವಿಭಾಗ ಕುಂದಾಪುರಕ್ಕೆ ಸಂಬಂಧಿಸಿದಂತೆ ಈ ಕಛೇರಿಯ ಕೆಳಕಂಡ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ನೇಮಕಮಾಡಲಾಗಿದೆ.

1) ಸಹಾಯಕ ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ಉಪವಿಭಾಗ, ಕುಂದಾಪುರ–ಸಾರ್ವಜನಿಕ ಮಾಹಿತಿ ಅಧಿಕಾರಿ

**13) ಸಹಾಯಧನ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ವಿಧಾನ ಅದಕ್ಕಾಗಿ ನಿಗದಿಗೊಳಿಸಲಾದ ಮೊತ್ತ ಮತ್ತು ಫಲಾನುಭವಿಗಳ ವಿವರ.**

– ಯಾವುದೂ ಇರುವುದಿಲ್ಲ–

**14) ರಿಯಾಯಿತಿಗಳನ್ನು ಪಡೆದವರ:– ಅಧಿಕಾರ ಪತ್ರಗಳನ್ನು ಮಂಜೂರು ಮಾಡಿದ ಬಗ್ಗೆ ವಿವರಗಳು.**

– ಯಾವುದೂ ಇರುವುದಿಲ್ಲ–

**15) ವಿದ್ಯುನ್ಮಾನ ವ್ಯವಸ್ಥೆಯಲ್ಲಿ ಲಭ್ಯವಿರುವ ಮಾಹಿತಿಗಳ ವಿವರ**

– ಯಾವುದೂ ಇರುವುದಿಲ್ಲ–

**16)** ಸಾರ್ವಜನಿಕ ಉಪಯೋಗಕ್ಕಾಗಿ ಪುಸ್ತಕ ಭಂಡಾರ ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಅಲ್ಲಿ ದೊರೆಯುವ ಸೌಲಭ್ಯಗಳು ಮತ್ತು ಕೆಲಸದ ವಿವರಗಳು ನಿಗದಿತ ಇತರ ಮಾಹಿತಿ

– ಯಾವುದೂ ಇರುವುದಿಲ್ಲ–

**17) ನಿಗದಿತ ಇತರ ಮಾಹಿತಿ:–**

ಸರ್ಕಾರವು ಮಾಹಿತಿ ಪಡೆಯುವ ಹಕ್ಕು ಅಧಿನಿಯಮಗಳನ್ನು ರಚಿಸಿದ ನಂತರ ಅದರಲ್ಲಿ ಬೇರೆ ಯಾವುದಾದರೂ ಮಾಹಿತಿಗಳನ್ನು ನಿಗದಿಗೊಳಿಸುವಲ್ಲಿ ಅದನ್ನು ಅಳವಡಿಸಲಾಗುವುದು.

ಸಹಾಯಕ ಕಾರ್ಯಪಾಲಕ ಇಂಜಿನಿಯರ್
ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ,
ಕುಂದಾಪುರ.

ಪಿ.ಆರ್.263

**ನಿರ್ದೇಶನಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ**
**ಫೀಲ್ಡ್‌ಮಾರ್ಷಲ್ ಕೆ.ಎಂ. ಕಾರ್ಯಪ್ಪ ಭವನ, ನಂ.58, ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ರಸ್ತೆ,**
**ಬೆಂಗಳೂರು–560 025**

**ಅಧಿಕೃತ ಜ್ಞಾಪನ ಪತ್ರ**

**ಸಂಖ್ಯೆ: ಸೈಕಪುಇ/ಸಿಬ್ಬಂದಿ/87ಎ/ಶಿಸ್ತು/ಮಕು/2010, ದಿನಾಂಕ:23ನೇ ಮಾರ್ಚ್, 2010**

**ವಿಷಯ:** ಶ್ರೀ ಮಡಿವಾಳಪ್ಪ ಕುಂಬಾರ, ಮೇಟಿ–ಕಂ–ವಾಚ್‌ಮನ್, ನಿರ್ದೇಶನಾಲಯ ಇವರನ್ನು ಸೇವೆಯಿಂದ ವಜಾ ಮಾಡುವ ಕುರಿತು.

**ಉಲ್ಲೇಖ:** (1) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು ನಿಯಮಗಳು–1957 ಹಾಗೂ ಪ್ರೊಬೇಷನರಿ ನಿಯಮ 1977.

(2) ಎಚ್ಚರಿಕೆ ನೋಟೀಸ್ ಸಂಖ್ಯೆ: ಸೈಕಪುಇ/ಸಿಬ್ಬಂದಿ/24/ಸಿಡಿಜಿ/ಶಿಸ್ತು/2009 ದಿನಾಂಕ:11.05.2009.

(3) ಶಿಸ್ತು ಕ್ರಮಕ್ಕೆ ನಿರ್ದೇಶನಾಲಯದ ಆದೇಶ ಸಂಖ್ಯೆ: ಸೈಕಪುಇ/ಸಿಬ್ಬಂದಿ/24/ಸಿಡಿಜಿ/ಶಿಸ್ತು/2009, ದಿನಾಂಕ:04.11.2009.

**ಪ್ರಸ್ತಾವನೆ:**

1. ಶ್ರೀ ಮಡಿವಾಳಪ್ಪ ಕುಂಬಾರ, ಮೇಟಿ–ಕಂ–ವಾಚ್‌ಮನ್, ಇವರ ನಡವಳಿಕೆ ಕುರಿತು ಉಲ್ಲೇಖ (2)ರಲ್ಲಿ ಸಿಬ್ಬಂದಿಯವರ ಮೇಲೆ ಮಾಡಿರುವ ಆಪಾದನೆಗಳು ಈ ಕೆಳಗಿನಂತಿವೆ:

(ಅ) ಅನುಮತಿ ಪಡೆಯದೆ ಕರ್ತವ್ಯಕ್ಕೆ ದಿನಾಂಕ:27.05.2009 ರಿಂದ ಸತತವಾಗಿ ಇದೂವರೆಗೂ ಗೈರು ಹಾಜರಾಗಿರುವುದು.

(ಆ) ನೀಡಲಾದ ಕಛೇರಿ ಜ್ಞಾಪನಾ ಪತ್ರಗಳಿಗೆ ಉತ್ತರ ನೀಡದೇ ಇರುವುದು.

(ಇ) ಸಿಬ್ಬಂದಿಯವರೆಗೆ ಅವಾಚ್ಯ ಶಬ್ಧಗಳನ್ನು ಬಳಸಿರುವುದು ಹಾಗೂ ಕರ್ತವ್ಯದಲ್ಲಿ ಅಶಿಸ್ತಿನಿಂದ ವರ್ತಿಸಿರುವುದು.

2. ಸದರಿ ಸಿಬ್ಬಂದಿಯವರು ದಿನಾಂಕ:10.01.2008ರಂದು ನಿರ್ದೇಶನಾಲಯದಲ್ಲಿ ಮೇಟಿ–ಕಂ–ವಾಚ್‌ಮನ್ ಗ್ರೂಪ್ 'ಡಿ' ಹುದ್ದೆಗೆ ಸೇವೆಗೆ ಹಾಜರಾಗಿ ಎರಡು ವರ್ಷಗಳ ಪರೀಕ್ಷಣಾ ಅವಧಿಯಲ್ಲಿರುತ್ತಾರೆ. ಪ್ರೊಬೇಷನ್ ಷರತ್ತಿಗೆ ಒಳಪಟ್ಟು ಕರ್ತವ್ಯಕ್ಕೆ ಹಾಜರಾಗಿ ಸೇವೆ ಸಲ್ಲಿಸುತ್ತಿದ್ದು, ಕರ್ತವ್ಯದಲ್ಲಿ ಮೇಲೆ ನಮೂದಿಸಿರುವ ಆಪಾದನೆಗಳು ತಿಳಿದು ಬಂದ ಹಿನ್ನೆಲೆಯಲ್ಲಿ, ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು–1957 ಹಾಗೂ ಪ್ರೊಬೇಷನರಿ ನಿಯಮ 1977ರ ಮೇರೆಗೆ, ಉಲ್ಲೇಖಿತ ಪತ್ರ (3)ರಲ್ಲಿ ಸಿಬ್ಬಂದಿಯವರಿಂದ ಲಿಖಿತ ಹೇಳಿಕೆಯನ್ನು ಪಡೆಯಲು ಆದೇಶಿಸಲಾಯಿತು. ಸದರಿ ಸಿಬ್ಬಂದಿಯವರಿಗೆ ಪತ್ರ ತಲುಪದೇ ಇದ್ದುದರಿಂದ ಪುನಃ ದಿನಾಂಕ:24.02.2010ರಂದು ನೋಂದಾಯಿತ ಅಂಚೆ ದ್ವಾರಾ ಕಳುಹಿಸಲಾಗಿ ಅದನ್ನು ಅವರು ದಿನಾಂಕ:02.03.2010 ರಂದು ಸ್ವೀಕರಿಸಿದ್ದಾರೆ. ಅವರಿಗೆ ನೀಡಲಾದ ಒಂದು ವಾರದ ಗಡುವಿನೊಳಗೆ ಅವರು ಯಾವುದೇ ಉತ್ತರ ನೀಡಿರುವುದಿಲ್ಲ.

**ಆದೇಶ**

ಶ್ರೀ ಮಡಿವಾಳಪ್ಪ ಕುಂಬಾರ, ಮೇಟಿ–ಕಂ–ವಾಚ್‌ಮನ್, ನಿರ್ದೇಶನಾಲಯ, ಇವರ ಕುರಿತು ಪ್ರಸ್ತಾವನೆಯಲ್ಲಿ ವಿವರಿಸಿದ ಎಲ್ಲಾ ಆರೋಪಗಳು ರುಜುವಾತಾಗಿರುವ ಹಿನ್ನೆಲೆಯಲ್ಲಿ ಹಾಗೂ ಪ್ರೊಬೇಷನ್ ಷರತ್ತಿಗೆ ಒಳಪಟ್ಟು ಕರ್ತವ್ಯಕ್ಕೆ ಹಾಜರಾಗಿ ಸೇವೆ ಸಲ್ಲಿಸುತ್ತಿದ್ದ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು–1957ರ ನಿಯಮ 9ರಲ್ಲಿ ನಿಹಿತಗೊಳಿಸಿರುವ ಅಧಿಕಾರವನ್ನು ಚಲಾಯಿಸಿ ಹಾಗೂ ಪ್ರೊಬೇಷನರಿ ನಿಯಮ 1977 ಒಳಪಟ್ಟು ನಿಯಮ (8) ರನ್ವಯ ಶ್ರೀ ಮಡಿವಾಳಪ್ಪ ಕುಂಬಾರ, ಮೇಟಿ–ಕಂ–ವಾಚ್‌ಮನ್, ಇವರನ್ನು ಸೇವೆಯಿಂದ ವಜಾ ಮಾಡಲಾಗಿದೆ.

ನಿರ್ದೇಶಕರು,
ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,
ಬೆಂಗಳೂರು.

ಪಿ.ಆರ್.500

**FORM NO.155**

**[See rule 329]**

**(Member's Voluntary Winding Up)**

**AUTHWAVE TECHNOLOGIES PRIVATE LIMITED**

**Notice convening final meeting of contributories**

Notice is hereby given in pursuance of section 497 that a general meeting of the members of the above named company will be held at 10 am on the 12th day of July 2010 at the registered office of the company i.e.180/C, 5th Cross, 3rd Main, Ayyappaswamy Temple Road, Prakashnagar, Bangalore-560021.

The General Meeting will be held for the purpose of having an account held before them, showing the manner in which the winding up has been conducted and the property of the company disposed of and of hearing any explanation that may be given by the liquidator and also of determining by a special resolution of the company, the manner in which the books, accounts and documents of the company and of the liquidator shall be disposed of.

Dated this 18th day of May 2010 Signature of the Liquidator

Bangalore **VIKAS KUMAR OSWAL**

Address: # 180/C, 5th Cross, 3rd Main, Ayyapaswamy Temple Road, Prakashnagar, Bangalore-560 021,
Phone:+91 23426483. Email-vikas@voaca.com

PD-75

**IN THE COURT OF XI ADDL. CHIEF METROPOLITAN MAGISTRATE, MAYOHALL, BANGALORE CITY**

It is here by notified to the public that the Commercial street police Station Bangalore City have seized the following properties and such properties are lying in the police station as unclaimed so far. Hence the owners of the properties & may put their claim one month from the date of this publication.

Bangalore City XI Addl. Chief Metropolitan

Dated: Magistrate Court, Mayohall, Bangalore.

List of the properties are lying in Commercial Street Police Station, Bangalore City which have been seized under Cr.No.249/97.

| ಪಿಎಫ್ ನಂ. | ಐಟಂ ನಂ. | ಮಾಲಿನ ವಿವರ |
|---|---|---|
| 49/97 | 1. | ಅಡ್ವರ್ಟೈಸ್ ಸ್ಲಿಪ್‌ಗಳಿರುವ ನೋಟೀಸ್ ಬೋರ್ಡ್ |
| | 2. | ವಿಜಯ್ ಅಸೋಸಿಯೇಟ್ಸ್ ಎಂದು ಪ್ರಿಂಟ್ ಆಗಿರುವ 10 ಅಕ್ನಾಲೆಡ್ಜ್‌ಮೆಂಟ್ ಪುಸ್ತಕಗಳು |
| | 3. | ಆರೋಪಿ ವಿಜಯ್ ಪಿ. ಪೂಜಾರಿ ಬಿಲ್ಡಿಂಗ್ ಮಾಲೀಕರಾದ ಶ್ರೀ ನಾಡಿಗ ರವರಿಂದ ರೂಂ ನಂ.311 ಅನ್ನು ತೆಗೆದುಕೊಂಡ ಬಗ್ಗೆ ಮಾಡಿಕೊಂಡಿರುವ ಲೀಸ್ ಅಗ್ರಿಮೆಂಟ್. |
| | 4. | 100 ರೂ. ಸ್ಟ್ಯಾಂಪ್ ಪೇಪರ್‌ನಲ್ಲಿ ವಿಜಯ್ ಅಸೋಸಿಯೇಟ್ಸ್ ಮತ್ತು ಗಾರ್ಡನ್ ಸಿಟಿ ಫ್ಯಾಷನ್ ಪ್ರೈ.ಲಿ., ಇವರುಗಳು ಮಾಡಿಕೊಂಡಿರುವ ಅಗ್ರಿಮೆಂಟ್‌ನ ಅಸಲು. |
| | 5. | ಶ್ರೀ ಚೆಟ್ಟಿಯಪ್ಪನವರು ವಿಜಯ ಅಸೋಸಿಯೇಟ್ಸ್‌ಗೆ ಬರೆದುಕೊಟ್ಟಿರುವ 20 ರೂ. ಸ್ಟಾಂಪ್ ಪೇಪರ್‌ನಲ್ಲಿ ಇವರ ಪರ್ಸನಲ್ ಗ್ಯಾರಂಟಿಯ ಅಸಲು. |
| | 6. | ಶ್ರೀ ಎಂ.ಎನ್. ಚೆಟ್ಟಿಯಪ್ಪ ನವರು ಬರೆದುಕೊಟ್ಟಿರುವ 20 ರೂ.ಸ್ಟಾಂಪ್ ನಲ್ಲಿರುವ ಪರ್ಸನಲ್ ಗ್ಯಾರಂಟಿಯ ಅಸಲು |
| | 7. | ವಿಜಯ್ ಅಸೋಸಿಯೇಟ್ಸ್‌ನ ಔಟ್ ಗೋಯಿಂಗ್ ಅಡ್ರಸ್ ಫೈಲ್. |
| | 8. | ವಿಜಯ್ ಅಸೋಸಿಯೇಟ್ಸ್‌ನ ಫ್ಯಾಕ್ಸ್ ಕನಫರ್‌ಮೇಷನ್ ಫೈಲ್. |
| | 9. | ಆರೋಪಿ ವಿಯಜ್ ಪೂರಿ ರವರು ಬ್ಲೂಕ್ರಾಸ್ ಛೇಂಬರ್ಸ್ ಓನರ್ಸ್ ಅಸೋಸಿಯೇಷನ್ ರವರಿಗೆ ನೀಡಿದ ಚೆಕ್ ಅಕೌಂಟ್ ನಂ.202389001 ಇದನ್ನು ಬ್ಯಾಂಕಿಗೆ ಹಾಕಿದ್ದು ಹಣವಿಲ್ಲವೆಂದು ವಾಪಸ್ ಬಂದಿರುವ ಲೆಟರ್. |

| ಪಿಎಫ್ ನಂ. | ಐಟಂ ನಂ. | ಮಾಲಿನ ವಿವರ |
|---|---|---|
| | 10. | ವಿಸಿಟಿಂಗ್ ಕಾರ್ಡ್ ಆಲ್ಬಮ್ ಎರಡು ಡೈರಿಗಳು. |
| | 11. | Mickey ಎಂಬ ಹೆಸರಿನ ಡೈರಿ |
| | 12. | ಫೋನ್ ನಂ. ಡೈರಿ. |
| | 13. | ವಿಜಯ್ ಅಸೋಸಿಯೇಟ್ಸ್‌ನ 3 ರಬ್ಬರ್ ಸ್ಟಾಂಪ್‌ನ ಸೀಲುಗಳು |
| | 14. | ಒಂದು ಸ್ಟಾಪ್ಲರ್ ಒಂದು ಇಂಕ್ ಪ್ಯಾಡ್ |
| | 15. | ವಿಜಯ್ ಅಸೋಸಿಯೇಟ್ಸ್‌ನ ವೋಚರ್‌ಫೈಲ್ |
| | 16. | ಟೆಲಿಫೋನ್ ಬಿಲ್ ಫೈಲ್ |
| | 17. | ವಿಜಯ್ ಅಸೋಸಿಯೇಟ್ಸ್‌ನ ಜನರಲ್ ಫೈಲ್ |
| | 18. | ವಿಜಯ್ ಅಸೋಸಿಯೇಟ್ಸ್‌ನ ಕೊಟೇಷನ್ ಫೈಲ್ |
| | 19. | ವಿಜಯ್ ಅಸೋಸಿಯೇಟ್ಸ್‌ನ ಅಪಾಯಿಂಟ್‌ಮೆಂಟ್ ಫೈಲ್ (ಬ್ರೋಕನ್) |
| | 20. | ವಿಜಯ್ ಅಸೋಸಿಯೇಟ್ಸ್‌ನ ಅಪಾಯಿಂಟ್‌ಮೆಂಟ್‌ನ ಅಪ್ಲಿಕೇಷನ್ ಫೈಲ್ |
| | 21. | ವಿಜಯ್ ಅಸೋಸಿಯೇಟ್ಸ್‌ನ ಇನ್‌ವಾಯ್ಸ್ ಫೈಲ್ |
| | 22. | ವಿಜಯ್ ಅಸೋಸಿಯೇಟ್ಸ್‌ನ ಸ್ಟಾಫ್ ಫೈಲ್ |
| | 23. | ವಿಜಯ್ ಅಸೋಸಿಯೇಟ್ಸ್‌ನ ವಿಸಿಟಿಂಗ್ ಕಾರ್ಡ್‌ನ ಒಂದು ಪಾಕೇಟ್ |
| | 24. | ನಾಲ್ಕು ಕಂಪ್ಯೂಟರ್ ಸಾಫ್ಟ್‌ವೇರ್ ಫ್ಲಾಪಿಡಿಸ್ಕ್‌ಗಳು ಅವುಗಳಲ್ಲಿ 3ರ ಮೇಲೆ HEWLET PACKED ಎಂದು ಬರೆದಿರುತ್ತದೆ. ಅವುಗಳ ಮೇಲೆ ಕ್ರಮವಾಗಿ 709 B008 711 B014 ಮತ್ತು 709 B005 ಎಂದು ಇರುತ್ತದೆ. ಇನ್ನೊಂದರ ಮೇಲೆ Panasonic SSETup Disk KX-P1121 ಎಂದು ಬರೆದಿರುತ್ತದೆ. J.315101 ಎಂಬ ನಂ.ಇರುತ್ತೆ. |

XI Addl. Chief Metropolitan
Magistrate Court, Mayohall, Bangalore.

| ಪಿಎಫ್ ನಂ. | ಐಟಂ ನಂ. | ಮಾಲಿನ ವಿವರ |
|---|---|---|
| 50/97 | 1. | ಒಂದು ರೌಂಡ್‌ಟೈಪ್‌ನ ಕಪ್ಪು ಬಣ್ಣದಿಂದ ಕೂಡಿದ ಮರದಿಂದ ಮಾಡಿರುವ ಡೈನಿಂಗ್ ಟೇಬಲ್ |
| | 2. | ನಾಲ್ಕು (4) ವುಡ್‌ನಿಂದ ಮಾಡಿರುವ ಡೈನಿಂಗ್ ಚೇರುಗಳು. |
| | 3. | ಒಂದು ಗೋದ್ರೇಜ್‌ನ 185 ಲೀಟರ್‌ನ ಫ್ರಿಡ್ಜ್ ಜೊತೆಗೆ ಒಂದು ವಿ–ಗಾರ್ಡ್ ಸ್ಟೆಬ್‌ಲೈಸರ್. |
| | 4. | ಕುಷನ್ ಮತ್ತು ಕವರ್‌ನಿಂದ ಕೂಡಿರುವ ಒಂದು ಸೋಫಾ. |
| | 5. | ಕುಷನ್ ಮತ್ತು ಕವರ್‌ನಿಂದ ಕೂಡಿರುವ ಎರಡು (2) ಸೋಫಾ ಚೇರುಗಳು. |
| | 6. | ಸುಮಾರು 3x6 ಅಡಿ ಅಳತೆಯ ಫೋಮನ್ ಹಾಸಿಗೆ. |
| | 7. | ಗುಂಡಗೆ ಇರುವ ಗ್ಲಾಸ್ ಹಾಕಿರುವ ಆರು ಕಾಲಿನ ಮರದಿಂದ ಮಾಡಿರುವ ಒಂದು ಟೀಪಾಯಿ. |

| ಪಿಎಫ್ ನಂ. | ಐಟಂ ನಂ. | ಮಾಲಿನ ವಿವರ |
|---|---|---|
| | 8. | ಒಂದು ಟಿ.ವಿ. ಸ್ಟಾಂಡ್ ಪ್ಲೈವುಡ್‌ನಿಂದ ಮಾಡಿರುತ್ತದೆ. |
| | 9. | ಒಂದು ಸ್ಯಾಮ್‌ಸಂಗ್ ಹೆಸರಿನ ವಿ.ಸಿ.ಡಿ. ಜೊತೆಗೆ ರಿಮೋಟ್. |
| | 10. | ಒಂದು ಸ್ಯಾಮ್‌ಸಂಗ್ ಹೆಸರಿನ ಕಲ್ಲರ್ ಟಿ.ವಿ. ಜೊತೆಗೆ ರಿಮೋಟ್. |
| | 11. | ವುಡ್‌ನಿಂದ ಮಾಡಿರುವ 5x6 ಅಡಿ ಅಳತೆಯ ಒಂದು ಮಂಚ. |
| | 12. | 5x6 ಅಡಿ ಅಳತೆಯ ಒಂದು ಪೋಮನ್ ಬೆಡ್. |
| | 13. | ಒಂದು ಕೆಂಪು ಬಣ್ಣದ ವುಲ್ಲನ್ ಕಂಬಳಿ. |
| | 14. | ಒಂದು ಪ್ಯಾನಸೋನಿಕ್ ಟೂ ಇನ್ ಒನ್ ಡಬ್ಬಲ್ ಕ್ಯಾಸೆಟ್‌ನ ಟೇಪ್ ರೆಕಾರ್ಡರ್. |
| | 15. | ನಾಲ್ಕು ತಲೆ ದಿಂಬುಗಳು |
| | 16. | ಲೈಟ್ ಗ್ರೇ ಕಲ್ಲರ್‌ನ ಬಿ.ಪಿ.ಎಲ್.ನ ವಾಷಿಂಗ್ ಮೆಷಿನ್ |
| | 17. | INALSA ಹೆಸರಿನ ಒಂದು ಮಿಕ್ಸಿ. |
| | 18. | ಪೋರ್ಟ್‌ಬಲ್ ಗ್ಯಾಸ್ ಸ್ಟೌವ್ ವಿತ್ ಸಿಲಿಂಡರ್. |

XI Addl. Chief Metropolitan
Magistrate Court, Mayohall, Bangalore.

**IN THE COURT OF 1ST M.M. TRAFFIC, MAYOHALL, BANGALORE CITY**

It is hereby notified to the public that the Commercial street Police Station Bangalore City have seized the following vehicles and such vehicles are lying in the Police Station. So far. Hence the owners of the properties & Vehicles may put their claim one month from the date of this publication.

Bangalore City. 1st Metropolitan
Dated: Magistrate Court, Mayohall, Bangalore.

List of vehicles are lying in Commercial Street Police Station, Bangalore City which have been seized under cases.

| Sl. No. | Cr.No. | P.F.No. | Vehicle & Reg.No. | Chassis No. | Engine No. |
|---|---|---|---|---|---|
| 1. | 108/2008 U/s 379 I.P.C. | 43/08 | Maruthi Van No number plate | ST-911V168136 | F8B1N 1370628 |
| 2. | - | 43/08 | Bajaj pulsar GA-07-A-5323 | DHVBKH-40775 | DHGBKH-40426 |
| 3. | - | 44/08 | Bajaj pulsar GA-07-A-5323 | DHVBKH-40775 | DHGBKH-40426 |
| 4. | 213/2009 U/s 379 I.P.C. | 157/09 | Suzuki Samurai KA-03-S-1225 | 7606F654130 | 7606M701930 |
| 5. | - | - | Honda Activa KA-05-EV-3991 | ME4JF085B88167824 | JF08E0173591 |

Bangalore City. Metropolitan Magistrate
Dated: Traffic Court-I, M.G. Road,
PR-844 Bangalore-1.

**ನಿರ್ದೇಶನಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ**
**ಫೀಲ್ಡ್‌ಮಾರ್ಷಲ್ ಕೆ.ಎಂ. ಕಾರ್ಯಪ್ಪ ಭವನ, ನಂ.58, ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ರಸ್ತೆ,**
**ಬೆಂಗಳೂರು–560 025**

**ಅಧಿಕೃತ ಜ್ಞಾಪನ ಪತ್ರ**

**ಸಂಖ್ಯೆ: ಸೈಕಪುಇ/ಸಿಬ್ಬಂದಿ/87ಎ/ಶಿಸ್ತು/ಸೂಬ/2010, ದಿನಾಂಕ:20ನೇ ಮಾರ್ಚ್, 2010**

**ವಿಷಯ:** ಶ್ರೀ ಸೂರ್ಯಕಾಂತ ಬನ್ನೂರ, ಅಧೀಕ್ಷಕರು, ಮಿಲಿಟರಿ ಬಾಲಕರ ವಸತಿ ನಿಲಯ, ಉಪ ನಿರ್ದೇಶಕರ ಕಾರ್ಯಾಲಯ ಸೈಕಪುಇ, ಕಾರವಾರ ಇವರನ್ನು ಸೇವೆಯಿಂದ ವಜಾ ಮಾಡುವ ಕುರಿತು.

**ಉಲ್ಲೇಖ:** (1) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು ನಿಯಮಗಳು–1957 ಹಾಗೂ ಪ್ರೊಬೇಷನರಿ ನಿಯಮ 1977.

(2) ಉಪ ನಿರ್ದೇಶಕರು, ಸೂಕಪುಇ, ಕಾರವಾರ ಇವರ ಪತ್ರ ಸಂಖ್ಯೆ: ಸೈಕಕಾ/ಸಿಬ್ಬಂದಿ/13/ಸೇಅಶಿ/2009 ದಿನಾಂಕ:17.09.2009.

(3) ಶಿಸ್ತು ಕ್ರಮಕ್ಕೆ ನಿರ್ದೇಶನಾಲಯದ ಆದೇಶ ಸಂಖ್ಯೆ: ಸೈಕಪುಇ/ಸಿಬ್ಬಂದಿ/24/ಸಿಡಿಜಿ/ಶಿಸ್ತು/2009, ದಿನಾಂಕ:16.10.2009.

(4) ಶ್ರೀ ಸೂರ್ಯಕಾಂತ ಬನ್ನೂರ, ಅಧೀಕ್ಷಕರು, ಇವರ ಲಿಖಿತ ಹೇಳಿಕೆ ನವೆಂಬರ್ 06 2009ರಂದು ಸ್ವೀಕರಿಸಲಾಗಿದೆ.

(5) ನಿರ್ದೇಶನಾಲಯದ ಆದೇಶ ಸಂಖ್ಯೆ: ಸೈಕಪುಇ/ ಸಿಬ್ಬಂದಿ/24/ ಸಿಡಿಜಿ/ಶಿಸ್ತು/ 2009, ದಿನಾಂಕ: 05.12.2009.

(6) ವಿಚಾರಣಾ ವರದಿ ಸಂಖ್ಯೆ: ಸೈಕಮ/ಶಿಸ್ತು/01/04/2010, ದಿನಾಂಕ:27.01.2010.

**ಪ್ರಸ್ತಾವನೆ:**

1. ಶ್ರೀ ಸೂರ್ಯಕಾಂತ ಬನ್ನೂರ, ಅಧೀಕ್ಷಕರು, ಮಿಲಿಟರಿ ಬಾಲಕರ ವಸತಿ ನಿಲಯ, ಕಾರವಾರ, ಇವರ ನಡವಳಿಕೆ ಕುರಿತು ಉಲ್ಲೇಖ (2)ರಲ್ಲಿ ಉಪ ನಿರ್ದೇಶಕರು, ಸೈಕಪುಇ, ಕಾರವಾರ ಇವರು ಸಿಬ್ಬಂದಿಯವರ ಮೇಲೆ ಮಾಡಿರುವ ಆಪಾದನೆಗಳು ಈ ಕೆಳಗಿನಂತಿವೆ:

(ಅ) ಅನುಮತಿ ಪಡೆಯದೆ ಕರ್ತವ್ಯಕ್ಕೆ ಗೈರು ಹಾಜರಾಗಿರುವುದು.

(ಆ) ಬಾಲಕರ ವಸತಿ ನಿಲಯದ ಕಾರ್ಯಗಳಲ್ಲಿ ಆಸಕ್ತಿ ತೋರದೇ ಇರುವುದು ಹಾಗೂ ನಿಲಯದ ಚಟುವಟಿಕೆಗಳಿಗೆ ಸ್ಪಂದಿಸದೇ ಇರುವುದು.

(ಇ) ನೀಡಲಾದ ಕಛೇರಿ ಜ್ಞಾಪನಾ ಪತ್ರಗಳಿಗೆ ಅವರು ನೀಡಿರುವ ಸ್ಪಷ್ಟೀಕರಣಗಳಿದ್ದಲ್ಲಿ ಅವುಗಳ ನೈಜತೆಯ ವಿಷಯಗಳು.

(ಈ) ದೂರವಾಣಿಯಲ್ಲಿ ಕಾರ್ಯಾಲಯದ ಸಿಬ್ಬಂದಿಯವರಿಗೆ ಅವಾಚ್ಯ ಶಬ್ದಗಳನ್ನು ಬಳಸಿರುವ ಹಾಗೂ ಇತರೆ ಮಧ್ಯವರ್ತಿಗಳಿಂದ ಕರೆ ಮಾಡಿಸಿ ಅಶಿಸ್ತಿನಿಂದ ವರ್ತಿಸಿರುವುದು.

2. ಸದರಿ ಸಿಬ್ಬಂದಿಯವರು ದಿನಾಂಕ:12.06.2008ರಂದು ಮಿಲಿಟರಿ ಬಾಲಕರ ವಸತಿ ನಿಲಯ ಕಾರವಾರ, ಇಲ್ಲಿ ಅಧೀಕ್ಷಕರ ಹುದ್ದೆಗೆ, ಎರಡು ವರ್ಷಗಳ ಪರೀಕ್ಷಣಾ ಅವಧಿಯ (ಪ್ರೊಬೇಷನ್) ಷರತ್ತಿಗೆ ಒಳಪಟ್ಟು ಕರ್ತವ್ಯಕ್ಕೆ ಹಾಜರಾಗಿ ಸೇವೆ ಸಲ್ಲಿಸುತ್ತಿದ್ದು, ಕರ್ತವ್ಯದಲ್ಲಿ ಮೇಲೆ ನಮೂದಿಸಿರುವ ಆಪಾದನೆಗಳು ತಿಳಿದು ಬಂದ ಹಿನ್ನೆಲೆಯಲ್ಲಿ, ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು–1957 ಹಾಗೂ ಪ್ರೊಬೇಷನರಿ ನಿಯಮ 1977ರ ಮೇರೆಗೆ ವಿಚಾರಣೆ ನಡೆಸುವುದು ಅವಶ್ಯವೆಂದು ಕಂಡು ಬಂದದ್ದರಿಂದ, ಉಲ್ಲೇಖಿತ ಪತ್ರ (3)ರಲ್ಲಿ ಆದೇಶಿಸಿ ಸಿಬ್ಬಂದಿಯವರಿಂದ ಲಿಖಿತ ಹೇಳಿಕೆಯನ್ನು ಪಡೆಯಲು ಆದೇಶಿಸಲಾಯಿತು. ಸದರಿ ಸಿಬ್ಬಂದಿಯವರು ಉಲ್ಲೇಖಿತ (4)ರಲ್ಲಿ ತಮ್ಮ ಹೇಳಿಕೆಯನ್ನು ಸಲ್ಲಿಸುತ್ತಾ ನನ್ನ ಆರೋಗ್ಯ ಸರಿ ಇಲ್ಲದ ಕಾರಣ ಗೈರು ಹಾಜರಾಗಿದ್ದೇನೆ. ಆದಷ್ಟು ಬೇಗನೆ ಕರ್ತವ್ಯಕ್ಕೆ ಹಾಜರಾಗುತ್ತೇನೆ ಎಂದು ತಿಳಿಸಿರುತ್ತಾರೆ. ಅವರು ಸಲ್ಲಿಸಿದ ಹೇಳಿಕೆಯನ್ನು ಆಧರಿಸಿ ಉಲ್ಲೇಖಿತ ಪತ್ರ (5)ರಲ್ಲಿ ಇಲಾಖಾ ವಿಚಾರಣೆಗೆ ನಿಯಮಾನುಸಾರ ಆದೇಶಿಸಲಾಯಿತು.

3. ಇಲಾಖಾ ವಿಚಾರಣಾಧಿಕಾರಿಗಳು ಉಲ್ಲೇಖಿತ ಪತ್ರ (6)ರಲ್ಲಿ ತಮ್ಮ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಶ್ರೀ ಸೂರ್ಯಕಾಂತ ಬನ್ನೂರ, ಅಧೀಕ್ಷಕರು, ಮಿಲಿಟರಿ ಬಾಲಕರ ವಸತಿ ನಿಲಯ, ಕಾರವಾರ, ಇವರ ಮೇಲೆ ಮಾಡಲಾದ ಆಪಾದನೆಗಳು ಕಂಡಿಕೆ 1ರ 'ಅ' ದಿಂದ 'ಈ' ವರೆಗೆ ಎಲ್ಲ ಆರೋಪಗಳು ರುಜುವಾತಾಗಿರುತ್ತವೆ ಎಂದು ತಿಳಿಸಿರುತ್ತಾರೆ.

**ಆದೇಶ**

ಶ್ರೀ ಸೂರ್ಯಕಾಂತ ಬನ್ನೂರ, ಅಧೀಕ್ಷಕರು, ಮಿಲಿಟರಿ ಬಾಲಕರ ವಸತಿ ನಿಲಯ, ಕಾರವಾರ, ಇವರ ಕುರಿತು ಪ್ರಸ್ತಾವನೆಯಲ್ಲಿನ ಕಂಡಿಕೆ 1ರ 'ಅ' ದಿಂದ 'ಈ' ವರೆಗೆ ವಿವರಿಸಿದಂತೆ ಹಾಗೂ ಇಲಾಖಾ ವಿಚಾರಣಾಧಿಕಾರಿಗಳು ನೀಡಿದ ವರದಿಯನ್ನು ಪರಿಗಣಿಸಲಾಗಿದೆ, ಆರೋಪಗಳು ರುಜುವಾತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು–1957ರ ನಿಯಮ 9ರಲ್ಲಿ ನಿಹಿತಗೊಳಿಸಿರುವ ಅಧಿಕಾರವನ್ನು ಚಲಾಯಿಸಿ ಹಾಗೂ ಪ್ರೊಬೇಷನರಿ ನಿಯಮ 1977 ಒಳಪಟ್ಟು ನಿಯಮ (8) ರನ್ವಯ ಶ್ರೀ ಸೂರ್ಯಕಾಂತ ಬನ್ನೂರ, ಅಧೀಕ್ಷಕರು, ಮಿಲಿಟರಿ ಬಾಲಕರ ವಸತಿ ನಿಲಯ, ಕಾರವಾರ, ಇವರನ್ನು ಸೇವೆಯಿಂದ ವಜಾ ಮಾಡಲಾಗಿದೆ.

ನಿರ್ದೇಶಕರು,
ಪಿ.ಆರ್.501 ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,
ಬೆಂಗಳೂರು.

**ಜಲಸಂಪನ್ಮೂಲ ಇಲಾಖೆ**

**ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ**

**ಅಧಿಸೂಚನೆ**

**ಸಂ.ಮುಇಂ/ಸನೀ(ಉ)ವ/ಬಿಜೆಪಿ/ಸಿ–2/09–10/2078, ದಿನಾಂಕ:25ನೇ ಮಾರ್ಚ್, 2010**

**ವಿಷಯ:** ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ ಕಛೇರಿಯಲ್ಲಿ ಮಾಹಿತಿಹಕ್ಕು ಅಧಿನಿಯಮ 2005ರಡಿಯಲ್ಲಿ ಹೊರಡಿಸಲಾಗಿರುವ ಅಧಿಸೂಚನೆಯಲ್ಲಿಯ "ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ"ಯವರ ಹೆಸರನ್ನು ಭಾಗಶಃ ಮಾರ್ಪಡಿಸುವ ಕುರಿತು.

**ಉಲ್ಲೇಖ:** ಈ ಕಛೇರಿಯ ಅಧಿಸೂಚನೆಯ ಸಂಖ್ಯೆ: ಮುಇಂ:ಸನೀ(ಉ)ವ:ಬಿಜೆಪಿ:ಸಿ–2:09–10:1551 ದಿನಾಂಕ: 11.03.2010.

ಸಾರ್ವಜನಿಕ ಮಾಹಿತಿ ಹಕ್ಕು ಅಧಿನಿಯಮ 2005 ರಡಿಯಲ್ಲಿ ಸೆಕ್ಷನ್ 5(1), 5(2) ಹಾಗೂ 19(1)ರಡಿಯಲ್ಲಿ ಉಲ್ಲೇಖಿತ ಅಧಿಸೂಚನೆಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರದ ಅಧಿಕಾರಿಗಳನ್ನು ನೇಮಿಸಿ ಅಧಿಸೂಚನೆಯನ್ನು ಹೊರಡಿಸಲಾಗಿದ್ದು, ಸದರಿ ಅಧಿಸೂಚನೆಯಲ್ಲಿಯ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿಗಳ ಹೆಸರನ್ನು ಭಾಗಶಃ ಮಾರ್ಪಡಿಸಿ ಈ ಕೆಳಗಿನಂತೆ ಅಧಿಸೂಚನೆ ಹೊರಡಿಸಲಾಗಿದೆ.

| ಕ್ರ.ಸಂ. | ಕಛೇರಿ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರಿ ಸೆಕ್ಷನ್ 19(1) |
|---|---|---|---|---|
| 1. | ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. | ಶ್ರೀ ಹೆಚ್.ಎಮ್. ಚಿದಾನಂದ, ಅಧೀಕ್ಷಕ ಅಭಿಯಂತರರು, ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. | ಶ್ರೀ ಆಯ್.ಎ. ಬಕ್ಷಿ, ನಿಬಂಧಕರು, ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. | ಶ್ರೀ ಹೆಚ್. ಸುರೇಶ್ ಮುಖ್ಯ ಇಂಜಿನೀಯರ್, (ಪ್ರಭಾರ) ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. |

**ಹೆಚ್. ಸುರೇಶ್**
ಪಿಆರ್–521 ಮುಖ್ಯ ಇಂಜಿನೀಯರರು,
ಸಣ್ಣ ನೀರಾವರಿ (ಉ) ವಲಯ, ಬಿಜಾಪುರ.

## ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

## ಅಧಿಸೂಚನೆ

**ಆದೇಶ ಸಂಖ್ಯೆ: ಎಂ.ಎ.ಜಿ.2/ಇತರೆ/ಸಿ.ಆರ್/379/09–10, ದಿನಾಂಕ:27ನೇ ಮಾರ್ಚ್, 2010**

**ವಿಷಯ:** ಹರಿಹರ ನಗರದಲ್ಲಿ ಗಣಿ ಲಾರಿಗಳ ಸಂಚಾರವನ್ನು ನಿರ್ಬಂಧಿಸಿ ಆದೇಶ ಹೊರಡಿಸುವ ಕುರಿತು.

**ಉಲ್ಲೇಖ:** 1) ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಪತ್ರದ ಸಂಖ್ಯೆ:ಸಿಬಿ–1/134/2010, ದಿನಾಂಕ:26.03.2010.

2) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ ಇವರ ಪತ್ರ ಸಂಖ್ಯೆ: ಪ್ರಾಸಾಅ/ದಾವ/ಡಿಎಸ್ಎ/ಪಿ.ಆರ್/194/09–10, ದಿನಾಂಕ:26.03.2010.

ಪೊಲೀಸ್ ಅಧೀಕ್ಷಕರು ದಾವಣಗೆರೆ ಜಿಲ್ಲೆ, ದಾವಣಗೆರೆ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ ಇವರು ಉಲ್ಲೇಖ (1) ಮತ್ತು (2)ರಲ್ಲಿ ಈ ಕಾರ್ಯಾಲಯಕ್ಕೆ ಪ್ರಸ್ತಾವನೆ ಸಲ್ಲಿಸಿ ಹರಿಹರ ನಗರದಲ್ಲಿ ಬೆಳಿಗ್ಗೆ 9.00 ರಿಂದ ರಾತ್ರಿ 9.00 ರವರೆಗೆ ಗಣಿ ಲಾರಿಗಳ ಸಂಚಾರವನ್ನು ನಿರ್ಭಂದಿಸಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲ್ಕಂಡ ಅಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಹರಿಹರ ನಗರದ ಊರಮ್ಮನ ದೇವಸ್ಥಾನದ ಬಳಿ ಮೈನ್ಸ್ ಲಾರಿಯನ್ನು ಅತೀ ವೇಗವಾಗಿ ಅಜಾಗರೂಕತೆಯಿಂದ ವಾಹನ ಚಾಲನೆ ಮಾಡಿದ ಕಾರಣ 8ನೇ ತರಗತಿ ವಿದ್ಯಾಭ್ಯಾಸ ಮಾಡುತ್ತಿದ್ದ ಕು:ಇಂದಿರಾ ಎಂಬ ವಿದ್ಯಾರ್ಥಿನಿಯೊಬ್ಬಳು ಅಪಘಾತಕ್ಕೀಡಾಗಿ ಸ್ಥಳದಲ್ಲೇ ಮೃತಪಟ್ಟಿರುತ್ತಾಳೆ. ಹರಿಹರ ನಗರದಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳಿದ್ದು, ಅತೀ ಹೆಚ್ಚಿನ ಸಂಖ್ಯೆಯಲ್ಲಿ ಸಾರ್ವಜನಿಕರು ಹಾಗೂ ಶಾಲಾ ಮಕ್ಕಳು ಹರಿಹರ ಮುಖ್ಯ ರಸ್ತೆಯನ್ನು ಸಂಚಾರಕ್ಕಾಗಿ ಉಪಯೋಗಿಸುತ್ತಿದ್ದು, ಮೈನ್ಸ್ ಲಾರಿಗಳು ಬಳ್ಳಾರಿ ಜಿಲ್ಲೆಯ ಸೊಂಡೂರು ಹಾಗೂ ಹೊಸಪೇಟೆ ಕಡೆಗಳಿಂದ ಹರಿಹರ ನಗರದ ಮೂಲಕ ದಿನದ 24 ಗಂಟೆಗಳು ಸಹ ಚಲಿಸುತ್ತಿದ್ದು, ವಿದ್ಯಾರ್ಥಿಗಳಿಗೆ ಹಾಗೂ ನಗರದ ಸಾರ್ವಜನಿಕರಿಗೆ ಇದರಿಂದಾಗಿ ಅಪಾರ ಪ್ರಮಾಣದಲ್ಲಿ ತೊಂದರೆಯಾಗುತ್ತಿದೆ. ಈ ಕುರಿತು ಹರಿಹರ ನಗರದ ಕೆಲವು ಸಂಘ ಸಂಸ್ಥೆಗಳು ಸಹ ಪ್ರತಿಭಟನೆಯನ್ನು ನಡೆಸಿರುವುದು ವರದಿಯಿಂದ ವ್ಯಕ್ತವಾಗುತ್ತದೆ.

ಆದ್ದರಿಂದ ಅಪಘಾತಗಳನ್ನುಂಟು ಮಾಡುತ್ತಿರುವ ಹಾಗೂ ಪರಿಸರ ಮಾಲಿನ್ಯಕ್ಕೆ ಕಾರಣವಾಗುತ್ತಿರುವ ಕಬ್ಬಿಣದ ಅದಿರು ಸಾಗಾಣಿಕಾ ವಾಹನಗಳು ಹರಿಹರ ನಗರದಲ್ಲಿ ಬೆಳಿಗ್ಗೆ 9.00 ರಿಂದ ರಾತ್ರಿ 9.00 ರವರೆಗೆ ನಿರ್ಬಂಧಿಸಿ ಪ್ರತಿಬಂಧಕಾಜ್ಞೆಯನ್ನು ಹೊರಡಿಸುವುದು ಸಾರ್ವಜನಿಕರ ಹಾಗೂ ಶಾಲಾ ಮಕ್ಕಳ ಹಿತದೃಷ್ಟಿಯಿಂದ ಅವಶ್ಯವೆಂದು ಮನಗಂಡಿರುತ್ತೇನೆ.

ಆದ ಕಾರಣ ಕೆ. ಅಮರನಾರಾಯಣ, ಭಾ.ಆ.ಸೇ. ಜಿಲ್ಲಾ ದಂಡಾಧಿಕಾರಿ, ದಾವಣಗೆರೆ ಜಿಲ್ಲೆ, ದಾವಣಗೆರೆ ಆದ ನಾನು ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 31(1)(ಬಿ) ಮತ್ತು ಕಲಂ 69ರಲ್ಲಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಹರಿಹರ ಗ್ರಾಮಾಂತರ ಪೊಲೀಸ್ ಠಾಣಾ ಸರಹದ್ದಿನ ರಾಜ್ಯ ಹೆದ್ದಾರಿ 25ರಲ್ಲಿ ಹರಪನಹಳ್ಳಿ ಕಡೆಯಿಂದ ಹರಿಹರ ಮುಖಾಂತರ ರಾಷ್ಟ್ರೀಯ ಹೆದ್ದಾರಿ 4 ಬೈಪಾಸ್ ವರೆಗೆ ಮತ್ತು ರಾಷ್ಟ್ರೀಯ ಹೆದ್ದಾರಿ 4 ಬೈಪಾಸ್ ರಸ್ತೆಯಿಂದ ಹರಿಹರ ಮುಖಾಂತರ ಹರಪನಹಳ್ಳಿ ಕಡೆಗೆ ಬರುವ ರಸ್ತೆ ಮಾರ್ಗದಲ್ಲಿ ಕಬ್ಬಿಣದ ಅದಿರು ಸಾಗಾಣಿಕಾ (ಮೈನ್ಸ್ ಲಾರಿ) ವಾಹನಗಳ ಸಂಚಾರವನ್ನು ಬೆಳಿಗ್ಗೆ 9.00 ರಿಂದ ರಾತ್ರಿ 9.00 ಗಂಟೆಯವರೆಗೆ ನಿಷೇಧಿಸಿ ಆದೇಶ ಹೊರಡಿಸಿರುತ್ತೇನೆ.

ಈ ನಿಷೇಧಾಜ್ಞೆಯನ್ನು ಪೊಲೀಸ್ ಇಲಾಖೆಯವರು ಇಂದಿನಿಂದಲೇ ಜಾರಿಗೊಳಿಸಲು ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಬ್ಬಿಣದ ಅದಿರು ಸಾಗಾಣಿಕಾ ವಾಹನಗಳನ್ನು ತಪಾಸಣೆ ನಡೆಸಿ ಮೋ.ವಾ.ಕಾಯ್ದೆ 1988 ಮತ್ತು ಅದರಡಿ ರಚಿತಗೊಂಡಿರುವ ನಿಯಮಾವಳಿಗಳನ್ವಯ ಇಲಾಖಾ ಶಾಸನ ಕ್ರಮ ಜರುಗಿಸಲು ಆದೇಶಿಸಿರುತ್ತೇನೆ.

**ಕೆ. ಅಮರನಾರಾಯಣ**

ಪಿಆರ್–599

ಜಿಲ್ಲಾ ದಂಡಾಧಿಕಾರಿಗಳು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು**

**ಭೂಸ್ವಾಧೀನ ಕಾಯ್ದೆ ಕಲಂ. 4(1) ಕರ್ನಾಟಕ ತಿದ್ದುಪಡಿ ಕಾಯ್ದೆ 33/91 ರ ಅನ್ವಯ ಅಧಿಸೂಚನೆ**

**ಕ್ರಮಾಂಕ: ಕಗೃಮಂ./ಭೂಸ್ವಾವಿ./ 44/2010-11 ದಿನಾಂಕ:21ನೇ ಮೇ 2010**

ಈ ಅಧಿಸೂಚನೆಯ ಅನುಬಂಧದಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯ ವಸತಿ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ, 1894 ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2) ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ, ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991 ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3 ರ ಪ್ರಕರಣದ ಮೇರೆಗೆ ಗೃಹ ಆಯುಕ್ತರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಯಾ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಬಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24 ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಪರಿಶಿಷ್ಟ**

**ಜಿಲ್ಲೆ: ಬೆಂಗಳೂರು ನಗರ ತಾಲ್ಲೂಕು : ಆನೇಕಲ್ ಹೋಬಳಿ: ಜಿಗಣಿ ಗ್ರಾಮ: ರಾಜಾಪುರ / ಹಿನ್ನಕ್ಕಿ**

| | | | | | | | | | | |
|---|---|---|---|---|---|---|---|---|---|---|
| | | | ಗ್ರಾಮ: ರಾಜಾಪುರ | | | | | | | |
| | | | | | ಚಕ್ಕು ಬಂದಿ | | | | | |
| ಕ್ರ ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ತರಹೆ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಜಮೀನಿನ ವಿಸ್ತೀರ್ಣ ಎ.ಗುಂ | ಆಕಾರ ರೂ . ಪೈ |

